
Cadbury's
GEMS
MILK CHOCOLATE

**Statement about ownership of CHANDAMAMA (Kannada)**
**Rule 8 (Form VI), Newspapers (Central) Rules, 1956**

| | | | |
|---|---|---|---|
| 1. | *Place of Publication* | ... | 'CHANDAMAMA BUILDINGS'<br>188, Arcot Road<br>Vadapalani, Madras-600 026 |
| 2. | *Periodicity* of *Publication* | ... | MONTHLY<br>1st of each calendar month |
| 3. | *Printer's Name* | ... | B. V. REDDI |
| | *Nationality* | ... | INDIAN |
| | *Address* | ... | Prasad Process Pvt Limited<br>188, Arcot Road, Vadapalani<br>Madras-600 026 |
| 4. | *Publisher's Name* | ... | B. VISWANATHA REDDI |
| | *Nationality* | ... | INDIAN |
| | *Address* | ... | Chandamama Publications<br>188, Arcot Road, Vadapalani<br>Madras-600 026 |
| 5. | *Editor's Name* | ... | B. NAGI REDDI |
| | *Nationality* | ... | INDIAN |
| | *Address* | ... | 'Chandamama Buildings'<br>188, Arcot Road, Vadapalani<br>Madras-600 026 |
| 6. | *Name & Address of individuals who own the paper* | ... | CHANDAMAMA CHILDREN'S TRUST FUND<br>Beneficieries:<br>1. B. V. HARISH<br>2. B. V. NARESH<br>3. B. V. L. ARATI<br>4. B. L. NIRUPAMA<br>5. B. V. SANJAY<br>6. B. V. SHARATH<br>7. B. L. SUNANDA<br>8. B. N. RAJESH<br>9. B. ARCHANA<br>10. B. N. V. VISHNU PRASAD<br>11. B. L. ARADHANA<br>12. B. NAGI REDDI (JR) |

All Minors, by Trustee:
M. UTTAMA REDDI, 9/3, V.O.C. Street, Madras-600 024

I, B. Viswanatha Reddi, hereby declare that the particulars given above are true to the best of my knowledge and belief.

*1st March* 1981

B. VISWANATHA REDDI
*Signature of the Publisher*

ಡಾಕ್ಟರ್, ನನ್ನ ಮಗೂಗೆ
ಮೈ ಚೆನ್ನಾಗಿಲ್ಲ, ತುಂಬಾ
ಸೊರಗಿದಾಳೆ. ಏನೂಂತ
ಸ್ವಲ್ಪ ನೋಡ್ತೀರಾ, ಪ್ಲೀಸ್?

ಜ್ವರ ಇಲ್ಲ ಕಣೇ, ಸ್ವಲ್ಪ
ಹೊಟ್ಟೆ ತೊಂದರೆ, ಅಷ್ಟೇ.
ವುಡ್‌ವರ್ಡ್ಸ್ ಗ್ರೈಪ್
ವಾಟರ್ ಕೊಟ್ಟುಬಿಟ್ರೆ
ಸಾಕು.

ಮಳೆ ಸುರೀತಾ ಇದೆ
ಯಲ್ಲ, ಡಾಕ್ಟರ್
ವುಡ್‌ವರ್ಡ್ಸ್ ಗ್ರೈಪ್
ವಾಟರನ್ನ ಈಗ ನಾನು
ಅವಳಿಗೆ ಕೊಡಬೋದಾ!

ಕೊಡಬೋದಮ್ಮಾ, ಊಂ ಮಳೆ, ಬಿಸಿಲು
ಚಳಿ, ಯಾವಾಗ ಬೇಕಾದ್ರೂ. ಮಕ್ಕಳ
ಆರೋಗ್ಯಕ್ಕಾಗಿ ಇರೋದೇ ಈ
ವುಡ್‌ವರ್ಡ್ಸ್ ಗ್ರೈಪ್ ವಾಟರ್.






100 ವರ್ಷಗಳಿಗೂ ಹೆಚ್ಚು ಕಾಲ
ಮಾತೃಲೋಕದ ವಿಶ್ವಾಸಪಾತ್ರವಾದುದು

# ವುಡ್‌ವರ್ಡ್ಸ್ ಗ್ರೈಪ್ ವಾಟರ್

CAS OPPL 3/80 KN

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ

"ಕಾಕತಾಲೀಯವಾಗಿ" ಕೆಲವು ಕಾರ್ಯಗಳು ನಡೆಯುವುದರಿಂದ, ಅದು ಶಕುನಕ್ಕೆ ಮೂಲವಾಯಿತು. ಅದರಿಂದಲೇ ಹೊರಟ ಶಾಖೆಯಂತೆ ಹರಕೆ ಹೇಳಿಕೊಳ್ಳುವ ಪದ್ಧತಿ ಹುಟ್ಟಿದೆ. ಶಕುನದಿಂದ ಕಾರ್ಯ ಹಾನಿಯಾದ, ಹರಕೆಗಳಿಂದ ಯಾವ ಪ್ರಯೋಜನವೂ ಇಲ್ಲದ ಉದಾಹರಣೆಗಳೂ ಅಲ್ಲಲ್ಲಿವೆ. ಇವೆರಡರ ವಿಷಯದಲ್ಲಿ ತಿಳುವಳಿಕೆಯ ಕಿರಣಗಳಾಗಿ ಈ ಸಂಚಿಕೆಯಲ್ಲಿ ಎರಡು ಕಥೆಗಳಿವೆ. ಓದಿದಾಗ ನಿಮಗೇ ಗೊತ್ತಾಗುತ್ತದೆ.

## ಅಮರವಾಣಿ

ಸ್ವಭಾವೋನೋಪದೇಶೇನ ಶಕ್ಯತೇ ಕರ್ತುಮನ್ಯಥಾ
ಸುತಪ್ತಮಪಿ ಪಾನೀಯಂ ಪುನರ್ಗಚ್ಛತಿ ಶೀತತಾಮ್

ಎಷ್ಟು ತಿಳಿ ಹೇಳಿದರೂ ಸಹಜ ಸ್ವಭಾವವನ್ನು ಮಾರ್ಪಡಿಸಲು ಸಾಧ್ಯವಾಗದು. ನೀರನ್ನು ಕಾಯಿಸಿ ಬಿಸಿ ಮಾಡಿದರೂ ಸ್ವಲ್ಪ ಹೊತ್ತಿಗೆ ಅದು ತಣ್ಣಗೇ ಆಗುತ್ತದೆ.

ಸಂಪುಟ : ೬೬ ಮಾರ್ಚಿ '೮೧ ಸಂಚಿಕೆ : ೩

ಬಿಡಿ ಪ್ರತಿ ರೂ. ೧-೫೦ : : ವಾರ್ಷಿಕ ಚಂದಾ ರೂ. ೧೮-೦೦




CHITRA




**ಎರಿಕ್ ಡೇಸ, ಪಾಂಗ್ಲಾ**

ಪ್ರ: ಭಾರತದೇಶದೊಳಗಿನ ಆದಿ ನಿವಾಸಿಗಳು ಇಂಥವರೇ ಎಂದು ನಿರ್ಣಯವಾಗಿ ಯಾರೂ ಹೇಳಿದಂತಿಲ್ಲ. ಕೆಲವರು ದ್ರಾವಿಡರೆಂದೂ, ಮತ್ತೆ ಕೆಲವರು ಅಲ್ಲವೆಂದೂ ಹೇಳುತ್ತಾರೆ. ಹೀಗಿರುವಾಗ ನಿಮ್ಮ ಅಭಿಪ್ರಾಯವೇನೆಂದು ಹೇಳುವಿರಾ ?

ಉ: ಈ ಕಾಲದಲ್ಲಿ ನಾವು ಮಾನವ ಜಾತಿಗಳಾಗಿ ಹೇಳುವಂಥವಾವುದೂ ೩೦, ೪೦ ಸಾವಿರ ವರ್ಷಗಳ ಹಿಂದೆ ಇರಲಿಲ್ಲವೆನ್ನುತ್ತಾರೆ. ಆದರೆ ವಾನರ ಲಕ್ಷಣಗಳನ್ನು ಕಳೆದುಕೊಂಡು ನರವಾನರ ರೂಪದಲ್ಲಿ ಕಾಣುವಂಥವು ಭಾರತದೇಶದಲ್ಲಿ ಹೊರಬಿದ್ದಿವೆ. ಉದಾಹರಣೆಗೆ ರಾಮಾಪಿತಿಕಸ್ ರೂಪವು ೧೪೦ ಲಕ್ಷ ವರ್ಷಗಳ ಹಿಂದಿನದು. ಈ ಒಂದು ಕಾರಣವನ್ನು ಹಿಡಿದು ನಮ್ಮ ದೇಶದಲ್ಲಿ ವಾಸ ಮಾಡಿದ ಮೊದಲನೇ ಮಾನವರಿಗೆ ಒಂದು ಜಾತಿಯ ಹೆಸರನ್ನು ಅಂಟಿಸುವುದು ಸರಿಯಲ್ಲವೆಂಬುದು ಸ್ಪಷ್ಟವಾಗುತ್ತದೆ. ಇದೊಂದು ಬದಿಗಿರಲಿ.

ದ್ರಾವಿಡ ಎಂಬ ಪದವು ಒಂದು ಜಾತಿಗೆ ಸೇರಿದುದೋ, ಭಾಷೆಗೆ ಸೇರಿದುದೋ, ಅಥವಾ ಜೀವಿತ ವಿಧಾನಕ್ಕೆ ಸೇರಿದುದೋ ಎಂಬುದು ಸ್ಪಷ್ಟವಾಗಿ ಗೊತ್ತಾಗಬೇಕು. ಅಂತರ್ಜಾತೀಯ ಮಾನವ ಜಾತಿಗಳು ಅಥವಾ ಉಪಜಾತಿಗಳು ಎಂದು ಹೇಳಲ್ಪಡುವುವುಗಳಲ್ಲಿ ದ್ರಾವಿಡಜಾತಿ ಎಂಬುದು ಇಲ್ಲ.

ನಮಗಿರುವ ಅತ್ಯಂತ ಪ್ರಾಚೀನವಾದ ವೈದಿಕ ಸಾಹಿತ್ಯದಲ್ಲಿ ಆರ್ಯರು, ದಾಸರು ಅಥವಾ ದಸ್ಯುಗಳು ಎಂಬ ಹೆಸರುಗಳು ಕಾಣುತ್ತವೆ. ಆದರೆ ದ್ರಾವಿಡರ ಪ್ರಸ್ತಾಪನೆ ಕಾಣುವುದಿಲ್ಲ. ಆ ಕಾಲದ ಅನಾರ್ಯರು, ಮೂಗಿಲ್ಲದ, ಚಟ್ಟೆಮೂಗಿನವರಾಗಿಯೂ, ಕಪ್ಪು ಬಣ್ಣದವರಾಗಿಯೂ ವರ್ಣಿಸಲ್ಪಟ್ಟಿದ್ದಾರೆ. ಇವು ಜಾತಿಯ ಲಕ್ಷಣಗಳು ಅಂದುಕೊಂಡರೆ, ಅಚ್ಚವಾಗಿ ಇಂಥ ಲಕ್ಷಣಗಳುಳ್ಳ ಮಾನವರು ಭಾರತದೇಶದಲ್ಲೆಲ್ಲಿಯೂ ಈಗಂತೂ ಇಲ್ಲ. ಆ ಮಾತಿಗೆ ಬಂದರೆ ಆರ್ಯ ಶಬ್ದವು ಕೂಡಾ ಜಾತಿವಾಚಕವಲ್ಲ. ಹಾಗಿರುತ್ತಿದ್ದರೆ ವಿಷ್ಣು, ರಾಮ, ಕೃಷ್ಣರಂತಹ ಅವತಾರ ಪುರುಷರೇ ಆರ್ಯರಲ್ಲದೆ ಹೋಗಬೇಕಾಗುತ್ತದೆ. ಭಾರತದಲ್ಲಿ ಹೇಳಲ್ಪಡುವ ಕಪ್ಪುಬಣ್ಣದ ಶರೀರದವನಾದ ವ್ಯಾಸನೂ ಆರ್ಯನಾಗಿರಲು ಸಾಧ್ಯವಾಗದು. ಭಾರತದಲ್ಲಿ ಕಾಣುವ ವ್ಯಾಸನ ವರ್ಣನೆ ಸರಿಯಾಗಿ ರಾಕ್ಷಸನನ್ನು ಸ್ಫುರಣೆಗೆ ತರುವಂತಿವೆ.

ಆದುದರಿಂದ ದ್ರಾವಿಡರೂ ಆರ್ಯರೂ ಎಂಬ ಮಾತುಗಳನ್ನು ಉಪಯೋಗಿಸುವವರೂ ಅವು ಜಾತಿಗಳ ಹೆಸರೆಂದು ಭ್ರಮೆಪಟ್ಟವರೋ, ಲೋಕವನ್ನು ಭ್ರಮೆಪಡಿಸುವವರೋ ಆಗಿರಬೇಕು.

ಈ ಕಾಲದಲ್ಲಿ ನಮಗೆ ನಿಜಕ್ಕೂ ಕಾಣುವಂಥವು ದ್ರಾವಿಡ ಭಾಷೆಗಳು ಮತ್ತು ದ್ರಾವಿಡ ಭಾಷೆಯ ಕುಟುಂಬಗಳೇ. ಈ ಭಾಷೆಗಳು ಅನಾದಿಯಾಗಿದ್ದುವೆನ್ನಲಿಕ್ಕೆ ಅವಕಾಶವೇನಿಲ್ಲ. ಹರಪ್ಪಾ ನಾಗರಿಕತೆಗೆ ಸೇರಿದ ಚಿತ್ರಲಿಪಿ ದ್ರಾವಿಡ ಭಾಷೆಯೆಂದು ಕೆಲವರು ವಾದಿಸುತ್ತಾರೆ. ಅದು ನಿಜವೆಂದೂ, ಆ ಭಾಷೆಯನ್ನು ಉಪಯೋಗಿಸಿದವರನ್ನು ದ್ರಾವಿಡರೆಂದೂ ಹೇಳಬಹುದಾದರೂ ಕೂಡಾ, ಭಾರತದೇಶದಲ್ಲಿ ಆದಿಯಿಂದಲೂ ಇದ್ದುದು ಹರಪ್ಪಾ ನಾಗರಿಕತೆಯನ್ನು ಸೃಷ್ಟಿಸಿದವರೇ ಎಂದು ಹೇಳಲಿಕ್ಕಾದರೂ ಆಧಾರ ಕಾಣುವುದಿಲ್ಲ.



# ಮೂವರು ಅಧಿಕಾರಿಗಳು

ಹಿಂದೆ ಒಂದಾನೊಂದು ಕಾಲದಲ್ಲಿ ಒಂದು ದೇಶವನ್ನು ವಿಶ್ವಶಾಂತನೆಂಬ ಮಹಾರಾಜನು ಅಪೂರ್ವವೆನಿಸುವಂತೆ ರಾಜ್ಯಪಾಲನೆ ಮಾಡಿಕೊಂಡಿದ್ದನು. ಅವನ ರಾಜ್ಯಪಾಲನೆಯ ವಿಶೇಷವೇನಂದರೆ, ರಾಜ್ಯಗಳಲ್ಲಿರುವ ಪ್ರತಿ ಗ್ರಾಮಗಳಿಗೂ ಮುಖ್ಯಾಧಿಕಾರಿಯೊಬ್ಬನನ್ನು ನಿಯಮಿಸಿದ್ದನು. ಅವನ ಮೂಲಕ ಗ್ರಾಮಗಳಿಗೆ ಸ್ವಪರಿಪಾಲನೆಯ ಕ್ರಮ ಏರ್ಪಡಿಸಲಾಗಿತ್ತು. ಆ ಪರಿಪಾಲನೆಗಳು ಹೇಗೆ ನಡೆಯುವುದೆಂದು ರಾಜನು ಸ್ವಂತವಾಗಿಯೇ ವಿಚಾರಿಸಿಕೊಂಡಿರುವನು. ಪ್ರತಿ ಗ್ರಾಮದಲ್ಲಿಯೂ ಒಂದು ವಾರ್ತಾ ಕೇಂದ್ರವಿದ್ದಿತು. ಪ್ರತಿ ವಾರ್ತೆಯೂ ಆ ಕೇಂದ್ರದಲ್ಲಿ ತಿಳಿಸಲ್ಪಟ್ಟ ಮೇಲೆಯೇ ಗ್ರಾಮದೊಳಗೆ ಹರಡಬೇಕೆಂಬ ವಿಧಿಯಿದ್ದಿತು. ದೇಶಕ್ಕೆ ಸಂಬಂಧಿಸಿದ ವಾರ್ತೆಗಳು ಕುದುರೇ ಸವಾರರ ಮೂಲಕವಾಗಿ ಎಲ್ಲಾ ಮೂಲೆಗಳ ಗ್ರಾಮ ಕೇಂದ್ರಗಳಿಗೂ ಹೋಗುತ್ತಿದ್ದುವು. ರಾಜನೂ ಆಗಾಗ ಪರ್ಯಟನೆ ಕೈಗೊಳ್ಳುತ್ತಿದ್ದನು.

ಒಂದು ವರ್ಷದಲ್ಲಿ ವಿಶ್ವಶಾಂತ ರಾಜನು ಗ್ರಾಮಗಳ ಪರ್ಯಟನೆಗೆ ಹೊರಟು ಮೊದಲು ರಾಮಪುರಕ್ಕೆ ಹೋದನು. ಆ ಗ್ರಾಮದ ಮುಖ್ಯಾಧಿಕಾರಿ ರಾಮರಾಜನು ಮಹಾರಾಜನ ಮುಂದೆ ಗ್ರಾಮ ಕಾರ್ಯಗಳ ನಿವೇದನೆಯನ್ನು ಒಪ್ಪಿಸಿದನು.

ರಾಮಪುರವು ದೊಡ್ಡ ಗ್ರಾಮ. ಪರಿಪಾಲನೆಯನ್ನು ನಿರ್ವಹಿಸಲು ಹತ್ತುಮಂದಿ ಉದ್ಯೋಗಸ್ಥರಿದ್ದರು. ಅವರೆಲ್ಲರೂ ಬೆಳಗ್ಗಿನಿಂದ ಸಾಯಂಕಾಲದವರೆಗೂ ಗ್ರಾಮದ ಕಾರ್ಯಾಲಯಕ್ಕೆ ಬಂದು ಕೆಲಸಗಳನ್ನು ನೋಡಿಕೊಳ್ಳುತ್ತಿದ್ದರು. ಆದರೆ ಬೆಳಿಗ್ಗೆ ಒಬ್ಬರಾದರೂ ನಿಯಮಿತವೇಳೆಗೆ ಕಾರ್ಯಾಲಯಕ್ಕೆ ಬರುತ್ತಿದ್ದಿಲ್ಲ. ಇದನ್ನು ತಡೆಗಟ್ಟಲಿಕ್ಕಾಗಿ ರಾಮರಾಜನು ಪ್ರತಿದಿನವೂ ಎಲ್ಲರಿಗಿಂತ ಮುಂದಾಗಿ ಕಾರ್ಯಾಲಯಕ್ಕೆ ಬಂದು ಬಾಗಿಲಲ್ಲೇ ನಿಂತುಕೊಂಡು, ತಡವಾಗಿ ಬಂದವರನ್ನು ನಿಂದಿಸುತ್ತಾ ಇದ್ದನು. ಆ ಮೇಲೆ ಹಾಗೆ ಬರುವುದು ಕಡಿಮೆಯಾಯಿತು.

ರಾಮರಾಜನು ನಿವೇದಿಸಿಕೊಂಡ ಈ ಸಮಾಚಾರವನ್ನು ಕೇಳಿ, ವಿಶ್ವಶಾಂತ ರಾಜನು, "ಕಾರ್ಯಾಲಯಕ್ಕೆ ದ್ವಾರಪಾಲಕನು ಇಲ್ಲವೇನು? ನೀನು ಸ್ವತಃ ತಿಳಿದುಕೊಳ್ಳುವಂತಹುದನ್ನು ಅವನಿಂದಲೇ ತಿಳಿಯಬಹುದಲ್ಲಾ?" ಎಂದು ಕೇಳಿದನು.



ತನ್ನ ಮಾತಿಗೆ ರಾಜನು ಮೆಚ್ಚಿಕೊಳ್ಳುವನೆಂದು ಮಾಡಿದ ರಾಮರಾಜನು ಬಿಳಿಚಿಕೊಂಡು, "ಇದು ಅನ್ಯಾಯ ಮಹಾಪ್ರಭೂ" ಎಂದನು.

"ಇದರಲ್ಲಿ ಅನ್ಯಾಯವೇನೂ ಇಲ್ಲ. ನೀನು ಇಲ್ಲಿಯ ಕಾರ್ಯಾಲಯದಲ್ಲಿರುವ ಎಲ್ಲಾ ಉದ್ಯೋಗಸ್ಥರಿಗೂ ಮೇಲಧಿಕಾರಿ. ಆದರೆ ಇಲ್ಲಿಯ ದ್ವಾರಪಾಲಕನು ನಿನಗಿಂತ ನಿನ್ನ ಕೆಳಗಿನ ಅಧಿಕಾರಿಗಳನ್ನು ಅಭಿಮಾನಿಸುತ್ತಾನೆ, ಗೌರವಿಸುತ್ತಾನೆ. ಬಾಗಿಲ ಹತ್ತಿರ ನಿಂತರೇ ಹೊರತು ನಿನ್ನ ಕೆಳಗಿನ ಉದ್ಯೋಗಸ್ಥರು ನಿನ್ನನ್ನು ಲೆಕ್ಕಿಸುವುದಿಲ್ಲ. ಅದಕ್ಕೆ ಜತೆಯಾಗಿ ಅವರ ಮೇಲೆ ನಿನಗೂ ನಂಬುಗೆಯಿಲ್ಲ. ಇದೆಲ್ಲದಕ್ಕೂ ಮೇಲೆ ತುಂಬಾ ಬೆಲೆ ಬಾಳುವ ನಿನ್ನ ಸಮಯವನ್ನು ದ್ವಾರಪಾಲನೆಯಲ್ಲಿಯೇ ವ್ಯಯಿಸಿಬಿಟ್ಟಿರುವೆ. ಈ ಒಂದು ಬಾಧ್ಯತೆಯನ್ನು ಮಾತ್ರವೇ ನೀನು ಸರಿಯಾಗಿ ಮಾಡುವುದೆಂದಾಯಿತು" ಎಂದು ವಿಶ್ವಶಾಂತ ರಾಜನು ಆ ಗ್ರಾಮಕ್ಕೆ ಹೊಸ ಮುಖ್ಯಾಧಿಕಾರಿಯನ್ನು ನಿಯಮಿಸಿ, ಭೀಮಪುರಕ್ಕೆ ಹೋದನು.

ತಾನು ಭೀಮಪುರಕ್ಕೆ ಹೋಗುವ ಸಂಗತಿಯನ್ನು ರಾಜನು ಮುಂದಾಗಿ ಯಾರಿಗೂ ಹೇಳಲಿಲ್ಲ. ಅವನು ಅಲ್ಲಿಗೆ ಹೋಗಿ ತಲುಪುವುದಕ್ಕೆ ಒಂದು ಗಂಟೆಯ ಮೊದಲು ಅವನ ಆಗಮನದ ವಾರ್ತೆ ಅಲ್ಲಿಗೆ ತಲುಪಿತು. ಆ ವಾರ್ತೆ ಮೊದಲು ಅಲ್ಲಿಯ ವಾರ್ತಾ ಕೇಂದ್ರಕ್ಕೆ ತಲುಪಿ, ಆಮೇಲೆ ಕಾರ್ಯಾಲಯಕ್ಕೆ ಹೋಯಿತು. ಅಲ್ಲಿಯ ಮುಖ್ಯಾಧಿಕಾರಿ, ರಾಜನು ಬರುತ್ತಾನೆಂದು ಊರ ನಡುವಿನ ವಾರ್ತಾ ಕೇಂದ್ರಕ್ಕೆ ಸುದ್ದಿ ಬಂದಾಗ, ತನ್ನ ಕಾರ್ಯಾಲಯದಲ್ಲಿರದೆ, ವಾರ್ತಾ ಕೇಂದ್ರವಾದ ಊರ ನಡುವಿನಲ್ಲಿದ್ದನು. ವಾರ್ತೆ ಕೇಳಿದ ಕೂಡಲೇ ಅವನು ಗಡಿಬಿಡಿಯಿಂದ ತನ್ನ ಕಾರ್ಯಾಲಯಕ್ಕೆ ಹೋಗಿ, ರಾಜನಿಗೆ ಘನವಾದ ಸ್ವಾಗತ ಮಾಡಲು ಅಲ್ಲಿಯ ಉದ್ಯೋಗಸ್ಥರಿಗೆಲ್ಲಾ ಎಚ್ಚರಿಕೆ ಕೊಟ್ಟನು.

"ಪ್ರಭುಗಳೇ, ದ್ವಾರಪಾಲಕನು ಚಿಕ್ಕ ಉದ್ಯೋಗಸ್ಥನಾದ್ದರಿಂದ ಇತರ ಉದ್ಯೋಗಸ್ಥರನ್ನು ನೋಡಿ ಹೆದರುತ್ತಾನೆ. ಅವರಿಗೆ ವ್ಯತಿರೇಕವಾಗಿ ಏನೂ ಹೇಳಲಾರನು. ಅದಲ್ಲದೆ ಅಧಿಕಾರಿಗಳು ಅವನನ್ನು ಚಿಕ್ಕ ಚಿಕ್ಕ ಲಂಚಗಳಿಂದ ವಶಪಡಿಸಿಕೊಳ್ಳುವ ಸಾಧ್ಯತೆಯೂ ಇದೆ. ನಾನು ಎಲ್ಲರಿಗೂ ಅಧಿಕಾರಿಯಾದುದರಿಂದ ನಾನೇ ಬಾಗಿಲಲ್ಲಿದ್ದರೆ ಉದ್ಯೋಗಸ್ಥರು ಭಯಪಟ್ಟು ವಿಧೇಯರಾಗುತ್ತಾರೆ" ಎಂದನು ರಾಮರಾಜ.

"ಹೌದು. ಬಾಗಿಲಲ್ಲಿ ಹಾಗೆ ನಿಲ್ಲಲು ನಿನಗೆ ನಾಚಿಕೆಯೋ ಅವಮಾನವೋ ಅನಿಸುವುದಿಲ್ಲವೇ ?" ಎಂದು ರಾಜನು ಕೇಳಿದನು.

"ಕರ್ತವ್ಯವನ್ನು ನಿರ್ವಹಿಸುವುದಲ್ಲಿ ನನಗೆ ನಾಚಿಕೆ ಅವಮಾನಗಳೇನೂ ಅನಿಸುವುದಿಲ್ಲ ಪ್ರಭುಗಳೇ" ಎಂದು ಹೆಮ್ಮೆಯಿಂದ ಹೇಳಿದ ರಾಮರಾಜ.

"ಒಳ್ಳೇದು, ನಾಳೆಯಿಂದ ನೀನು ದ್ವಾರಪಾಲಕನಾಗಿಯೇ ಇರು." ಎಂದನು ವಿಶ್ವಶಾಂತರಾಜ.



ರಾಜನು ಭೀಮಪುರಕ್ಕೆ ಬಂದ ಕೂಡಲೇ ತನ್ನ ಸ್ವಾಗತಕ್ಕೆ ಬೇಕಾದುದೆಲ್ಲಾ ಏರ್ಪಾಡಾಗಿರುವುದನ್ನು ನೋಡಿ ರಾಜನಿಗೆ ಒಂದು ಬಗೆಯ ಸೋಲಿನ ಅನುಭವವಾಯಿತು. ತಾನು ಅಕಸ್ಮಾತ್ತಾಗಿ ಬಂದು ಅಲ್ಲಿರುವ ಅಧಿಕಾರಿಗಳನ್ನು ಆಶ್ಚರ್ಯಪಡಿಸಬೇಕೆಂಬುದು ಅವನ ಉದ್ದೇಶವಾಗಿತ್ತು.

"ನಾನು ಬರುವ ಸಮಾಚಾರ ನಿಮಗೆ ಮೊದಲೇ ಹೇಗೆ ತಿಳಿಯಿತು ?" ಎಂದು ರಾಜನು ಅಲ್ಲಿಯ ಮುಖ್ಯಾಧಿಕಾರಿ ಭೀಮರಾಜನನ್ನು ಕೇಳಿದನು.

ತಾನು ದೊಡ್ಡ ಕೆಲಸ ಮಾಡಿ ರಾಜನ ಪ್ರಶಂಸೆಗೆ ಪಾತ್ರನಾಗುವೆನೆಂದು ಆ ಮುಖ್ಯಾಧಿಕಾರಿ ಅಂದು ಕೊಂಡು, "ಅಕಸ್ಮಾತ್ತಾಗಿ ತಾವು ಬರುವ ವಾರ್ತೆ ತಿಳಿಯಿತು. ಕೂಡಲೇ ತಮಗಾಗಿ ಈ ಏರ್ಪಾಡುಗಳನ್ನೆಲ್ಲಾ ಮಾಡಸಿಬಿಟ್ಟೆ" ಎಂದ ಭೀಮರಾಜ.

"ಇಲ್ಲಿ ನೋಡಿದರೆ ನಿನ್ನ ಕಾರ್ಯಾಲಯ ಊರಿನ ಕೊನೆಯಲ್ಲಿದೆ. ವಾರ್ತೆಗಳು ಮೊದಲು ಬರುವುದು ಊರ ನಡುವಿಗೆ ತಾನೇ ? ಆ ಸಮಯದಲ್ಲಿ ನೀನು ಕಾರ್ಯಾಲಯದಲ್ಲಿರದೆ ಊರ ನಡುವಿನಲ್ಲಿರುವ ವಾರ್ತಾ ಕಚೇರಿಯಲ್ಲಿ ಇದ್ದೆಯೆಂದಾಯಿತಲ್ಲ ? ಅಲ್ಲೇಕೆ ಇದ್ದೆ ?" ಎಂದು ರಾಜನು ಕೇಳಿದನು.

"ಒಂದು ಮುಖ್ಯ ಕೆಲಸಕ್ಕಾಗಿ ಅಲ್ಲಿಗೆ ಹೋದೆ" ಎಂದು ತಡವರಿಸಿಕೊಂಡು ಹೇಳಿದ ಭೀಮರಾಜ.

"ನಿನ್ನ ಕೈ ಕೆಳಗೆ ಉದ್ಯೋಗಸ್ಥರಿರುವಾಗ ನೀನೇ ಹೋಗಬೇಕಾದ ಮುಖ್ಯ ಕೆಲಸ ಏನು ಬಂತು ? ನಿನಗೆ ನಿನ್ನ ಜವಾಬ್ದಾರಿ ಸರಿಯಾಗಿ ತಿಳಿಯದೆಂದಾಯಿತು. ನಿನ್ನ ಸ್ಥಾನದಲ್ಲಿ ಇನ್ನೊಬ್ಬನನ್ನು ಮುಖ್ಯಾಧಿಕಾರಿಯಾಗಿ ನಿಯಮಿಸುತ್ತೇನೆ" ಎಂದು ರಾಜನು ಆಗಿಂದಾಗಲೇ ಹೊಸ ಅಧಿಕಾರಿಯನ್ನು ನಿಯಮಿಸಿ, ಸೋಮಪುರಕ್ಕೆ ಹೊರಟುಹೋದನು.

ಸೋಮಪುರದ ಗ್ರಾಮ ಮುಖ್ಯಾಧಿಕಾರಿ ಸೋಮರಾಜನು ವಿಶ್ವಶಾಂತ ರಾಜನಿಗೆ ದೊಡ್ಡ ರೀತಿಯಲ್ಲಿ ಸ್ವಾಗತದ ಏರ್ಪಾಡು ಮಾಡಿದನು. "ನೀನು ಮಾಡಿದ ಸ್ವಾಗತ ಸತ್ಕಾರಗಳೆಲ್ಲಾ ಚೆನ್ನಾಗಿಯೇ ಇವೆ. ಗ್ರಾಮದ ಮುಖ್ಯಾಧಿಕಾರಿಯಾಗಿ ನೀನು ಸಾಧಿಸಿದ ಕಾರ್ಯಗಳು ಏನೇನು ? ಅದನ್ನು ಹೇಳು" ಎಂದನು ರಾಜ.

"ಎಲ್ಲಕ್ಕಿಂತಲೂ ದೊಡ್ಡ ವಿಶೇಷವೊಂದಿದೆ ಪ್ರಭುಗಳೇ. ನಾನು ಗ್ರಾಮದ ಕಾರ್ಯಾಲಯದಲ್ಲಿರುವುದೇ ಶುಭದಾಯಕವೆಂದು ಎಲ್ಲರೂ ಹೇಳುತ್ತಾರೆ. ಅದಕ್ಕೆ ನಿದರ್ಶನವೇನೆಂದರೆ, ಗ್ರಾಮದಲ್ಲಿ ನಡೆಯುವ ಪ್ರತಿ ಸಂತಾಪ ಕೂಟ ಕಾರ್ಯಗಳೆಲ್ಲಾ ನಾನು ಗ್ರಾಮದಲ್ಲಿ ಇಲ್ಲದಿರುವಾಗಲೇ ನಡೆಯುತ್ತವೆ" ಎಂದನು ಸೋಮರಾಜ.

"ಸಂತಾಪ ಕೂಟಗಳೆಂದರೆ ಏನದು?" ಎಂದು ವಿಶ್ವಶಾಂತರಾಜನು ಕೇಳಿದನು.

"ರಾಜ್ಯದಲ್ಲಾಗಲೀ ಗ್ರಾಮದಲ್ಲಾಗಲೀ ಯಾರಾದರೂ ತೀರಿ ಹೋಗಿಬಿಟ್ಟರೆ ಕಾರ್ಯಾಲಯ

ದಲ್ಲಿ ಸಂತಾಪಕೂಟವನ್ನು ಸೇರಿಸಿ, ಸತ್ತುಹೋದವರಿಗೆ ಶ್ರದ್ಧಾಂಜಲಿ ಸಮರ್ಪಿಸಬೇಕೆಂಬ ಪದ್ಧತಿ ನಮ್ಮಲ್ಲಿದೆ. ಇದನ್ನು ನಡೆಸಬೇಕಾದವನು ಗ್ರಾಮಾಧಿಕಾರಿಯೇ, ಅಂದರೆ ನನ್ನ ಎರಡನೇಯ ಅಧಿಕಾರಿಯಾದ ವೀರ ಭದ್ರನು ಕಳೆದ ವರ್ಷದಲ್ಲಿ ಇಪ್ಪತ್ತಾರುಮಂದಿ ಪ್ರಮುಖರ ಮರಣಗಳಿಗೂ ಸಂತಾಪ ಸಭೆಗಳನ್ನು ನಡೆಸಿ ಶ್ರದ್ಧಾಂಜಲಿ ಸಮರ್ಪಿಸಿದ್ದಾನೆ" ಎಂದನು ಸೋಮರಾಜ.

"ಶುಭಕಾರ್ಯಗಳ ಸಮಾಚಾರವೇನು?" ಎಂದು ರಾಜನು ಕೇಳಿದನು.

"ನಾನು ಇಲ್ಲದಿರುವಾಗ ಶುಭಕಾರ್ಯಗಳು ನಡೆಯಲು ಸಾಧ್ಯವಿಲ್ಲವಷ್ಟೇ? ಅಂಥವೆಲ್ಲಾ ನನ್ನ ಅಧ್ಯಕ್ಷತೆಯಲ್ಲೇ ನಡೆಯುತ್ತವೆ. ಅಂತಲೇ ಎಲ್ಲರೂ ನನ್ನನ್ನು ಶುಭಕಾರ್ಯಗಳಿಗೂ, ವೀರಭದ್ರನನ್ನು ಅಶುಭಕಾರ್ಯಗಳಿಗೂ ಗುರುತಿಸುತ್ತಾರೆ. ಅಂದ ಮಾತ್ರಕ್ಕೆ ಇದರಲ್ಲಿ ವೀರಭದ್ರನದು ತಪ್ಪು ಯಾವುದೂ ಇಲ್ಲ. ಅಶುಭಗಳು ವೀರಭದ್ರನು ಇರುವಕಾರಣದಿಂದಲೇ ಬರುತ್ತವೆನ್ನುವಂತಿಲ್ಲ. ನಾನು ಇಲ್ಲದಿರುವ ಕಾರಣದಿಂದಲೇ ಅಂತಹ ಸಂತಾಪಕೂಟಗಳನ್ನು ಅವನೇ ನಡೆಸಬೇಕಾಗುತ್ತೆ ಅಷ್ಟೇ" ಎಂದನು ಸೋಮರಾಜ, ತಾನು ಶುಭ ಸಂಕೇತದವನೆಂಬ ಹೆಮ್ಮೆಯಿಂದ.

ವಿಶ್ವಶಾಂತರಾಜನು ಹುಬ್ಬುಗಂಟಿಕ್ಕಿ ಕೋಪದಿಂದ ಸೋಮರಾಜನನ್ನು ನೋಡಿ, "ವರ್ಷದಲ್ಲಿ ಇಪ್ಪತ್ತಾರು ಸಾರಿ, ಅಂದರೆ ಸರಾಸರಿ ತಿಂಗಳಿಗೆ ಎರಡುಸಾರಿ ಗಿಂತಲೂ ಹೆಚ್ಚಾಗಿ ಪ್ರಮುಖರ ಮರಣಗಳಾಗುತ್ತ ವೆಂದಾಯಿತು. ಆದರೂ ನೀನು ಒಂದು ಸಂತಾಪ ಸಭೆಗೂ ಇಲ್ಲವೆಂದರೆ, ಬಹಳಕಾಲ ನೀನು ಕಾರ್ಯಾಲಯದಲ್ಲಿರದೆ, ಬೇರೆ ಎಲ್ಲೆಲ್ಲೋ ತಿರುಗಾಡುವೆ, ಹೌದಾ? ಕೇವಲ ಶುಭಕಾರ್ಯಗಳಿಗೆ ಮಾತ್ರವೇ ಗ್ರಾಮಕ್ಕೆ ಬರುವವನು ನೀನು! ಹೊಣೆ ಗಾರನಾದ ಅಧಿಕಾರಿ ಗ್ರಾಮದಲ್ಲೇ ಇದ್ದು ಎಲ್ಲವನ್ನೂ ನಡೆಸಿಕೊಡಬೇಕೇ ಹೊರತು, ಹೊರಗೆ ತಿರುಗಾಡು ವವನಾಗಿರಬಾರದು. ಆ ವೀರಭದ್ರನನ್ನೇ ಮುಖ್ಯ ಅಧಿಕಾರಿಯನ್ನಾಗಿ ನಿಯಮಿಸುತ್ತೇನೆ" ಎಂದನು.

ಅಲ್ಲಿಂದ ವಿಶ್ವಶಾಂತರಾಜನು ಹೊರಡಲಿರುವಾಗ, "ಇನ್ನು ಯಾವ ಗ್ರಾಮಕ್ಕೆ ಹೋಗೋಣ ಪ್ರಭೂ?" ಎಂದು ಮಂತ್ರಿ ಕೇಳಿದನು.

"ಎಲ್ಲಿಗೂಬೇಡ. ಈ ಮೂರು ಗ್ರಾಮಗಳ ಅಧಿಕಾರಿಗಳೊಂದಿಗೆ ನಾನು ಹೇಗೆ ವ್ಯವಹರಿಸಿದೆ ನೆಂಬುದನ್ನು ರಾಜ್ಯದೊಳಗೆಲ್ಲಾ ತಿಳಿಯಪಡಿಸಿರಿ ಸಾಕು" ಎಂದನು ವಿಶ್ವಶಾಂತರಾಜ. ಹೀಗೆ ವಿಶ್ವ ಶಾಂತನ ರಾಜ್ಯವು ಅವನ ಕಾಲದಲ್ಲಿ ತುಂಬ ಸುಭಿಕ್ಷವಾಗಿತ್ತು.






## ೧೦

[ಚತುರ್ನೇತ್ರನು ತನಗೂ ಏಕಾಕ್ಷಿಗೂ ಬಾಲ್ಯದಿಂದಲೇ ವಿರೋಧ ಬೆಳೆದು ಬಂದ ಬಗೆಯನ್ನು ಹೇಳಿದನು. ಅವರಿಬ್ಬರೂ ಒಂದೇ ಊರಿನಲ್ಲಿ ಹುಟ್ಟಿ ಮೇಲಾಟದಿಂದ ಬೆಳೆಯುತ್ತ, ಒಂದು ಜಿಂಕೆ ಕರುವಿನ ಕಾರಣದಿಂದ ಚತುರ್ನೇತ್ರನು ಏಕಾಕ್ಷಿಗೆ ಹೊಡೆದು, ಸಿಂಹದ ಭಯದಿಂದ ಮರದ ಮೇಲೆ ಏರಿದನು. ಚುತುರ್ನೇತ್ರನು ಸತ್ತು ದೆವ್ವವಾದಂತೆ ಏಕಾಕ್ಷಿ ಎಲ್ಲರನ್ನೂ ನಂಬಿಸಿದನು.]

**ಈ** ರೀತಿಯಾಗಿ ಚತುರ್ನೇತ್ರನು ಹೇಳುತ್ತಿದ್ದಾಗ, ಮುಂದಿನ ವಿವರಗಳನ್ನು ಹೇಳಲು ಸಾಧ್ಯವಾಗದಂತೆ ಎಲ್ಲಿಯೋ ಕೋಲಾಹಲ ಕೇಳ ತೊಡಗಿತು. ಸಮುರ ಸೇನನಿಗೂ ಸೈನಿಕರಿಗೂ ಚತುರ್ನೇತ್ರನಿಗೆ ಏಕಾಕ್ಷಿಯ ಮಾಯಾಜಾಲವು ಬಿದ್ದ ಗುಂಗಿನ ಕಥೆಯ ಅಂಕದ ಮೇಲೆ ಪರದೆ ಅಡ್ಡ ಬಿದ್ದಂತಾಯಿತು ಆ ಕೋಲಾಹಲ ಶಬ್ದ. ಅವರೆಲ್ಲ ತಲೆ ತಿರುಗಿಸಿ ಆ ಶಬ್ದವು ಎಲ್ಲಿಂದ ಬರುತ್ತಿದೆಯೆಂದು ಸುತ್ತಲೂ ನೋಡಿದರು. ದೂರ ದಿಂದ ಆ ಶಬ್ದ ಈಕಡೆಗೇ ಬರುವಂತಿತ್ತು. ಮತ್ತೊಮ್ಮೆ ಅದು ಬೇರೆ ದಿಕ್ಕಿಗೆ ಹೋಗುವಂತಿತ್ತು.

ಅಷ್ಟು ಹೊತ್ತಿಗೆ ಸೂರ್ಯನು ಅಸ್ತಮಿಸಿ ಬಿಟ್ಟಿದ್ದನು. ಕತ್ತಲೆ ಪೂರ್ತಿಯಾಗಿ ಇನ್ನೂ ತಲೆ ಹಾಕಲಿಲ್ಲ. ಆ ಗುಡ್ಡದ ಪ್ರಾಂತಗಳಲ್ಲಿ ಕಠ್ರಗಿನ ಕತ್ತಲೆ ಮೆಲ್ಲಮೆಲ್ಲನೆ ಮುಸುಕು ಹಾಕುತ್ತಾ ಬರುತ್ತಿತ್ತು. ಗಾಳಿಯ ಹೊಯ್ದಾಟದೊಂದಿಗೆ ದೂರದಲ್ಲಿ ಮಾನವರ ಕೂಗಾಟದ ಹೊರತು, ಅವರು ಎಲ್ಲಿರುವರೆಂಬುದೂ ಯಾವ ಕಡೆಗೆ ಹೋಗು ತ್ತಿದ್ದಾರೆಂಬುದೂ ಸಮುರಸೇನನಿಗೆ ಗೊತ್ತಾಗಲಿಲ್ಲ. ಅಷ್ಟರಲ್ಲಿ ಕೋಲಾಹಲವನ್ನು ಮೀರಿಸುವಂಥ ಏಕಾಕ್ಷಿ ಮಾಂತ್ರಿಕನ ಉಚ್ಚದನಿಯ ಕಂಚು ಕಂಠಸ್ವರ, "ಕಾಲ




ಭುಜಂಗಾ ! ಹೇ ಕಪಾಲಾ ! ಬನ್ನಿ ಹೀಗೆ !" ಎಂಬ ಕೂಗು ಭಯಂಕರವಾಗಿ ಕೇಳಿಸಿತು.

ಚತುರ್ನೇತ್ರನು ಆ ಕಡೆಗೆ ಕಣ್ಕುತ್ತಿ ನೋಡಿ, "ಸಮರಸೇನಾ ! ಎಲ್ಲಾ ತಿಳಿಯಿತು ! ಒಂದು ಕಡೆಯಿಂದ ನಿಮ್ಮ ಕುಂಡಲಿನೀ ದ್ವೀಪದ ಮನುಷ್ಯರೂ, ಎರಡನೇ ಕಡೆಯಿಂದ ಏಕಾಕ್ಷಿಯೂ ಬರುತ್ತಿದ್ದಾರೆ. ಈಗ ಅವರ ಸಂಗತಿ ಏನೂಂತ ನೋಡಬೇಕು. ನಾವೆಯ ಕಥೆಯನ್ನು ಆಮೇಲೆ ಹೇಳುತ್ತೇನೆ. ಪ್ರಸ್ತುತ ಈ ಕಡೆಗೆ ಬರುವವರ ಕಣ್ಣಿಗೆ ನಾವು ಬೀಳದಿರುವುದೇ ಒಳ್ಳೇದು. ಮರೆಯಲ್ಲೇ ಅವರ ಸಮಾಚಾರ ತಿಳಿದು ಆಮೇಲೆ ಅದಕ್ಕೆ ತಕ್ಕಂತೆ ಪ್ರವರ್ತಿಸೋಣ" ಎಂದನು.

ಸಮರಸೇನನಿಗಾದರೂ ಸ್ವತಂತ್ರವಾಗಿ ಬೇರೇನು ಮಾಡಲಿಕ್ಕೂ ತೋರಲಿಲ್ಲ. ಬರುವವರು ಕುಂಡಲಿನೀ ದ್ವೀಪದ ಮನುಷ್ಯರೆಂದು ಚತುರ್ನೇತ್ರನ ಬಾಯಿಯಿಂದ ಹೊರಟ ಕೂಡಲೇ ದ್ರೋಹಿ ಕುಂಭಾಂಡನೇ ಅವನ ಮನಸ್ಸಿಗೆ ಕಂಡನು. ಅವನ ನಾಯಕತ್ವದಲ್ಲಿ ಇಲ್ಲಿಯ ಆಟವಿಕರೇ ಹೀಗೆ ಕೂಗಾಡಿಕೊಂಡು ಬರುತ್ತಿದ್ದಾರೆಂಬುದು ಅರ್ಥವಾಯಿತು ಅವನಿಗೆ. ಅಂತಲೇ ದುಡುಕಬಾರದೆಂದುಕೊಂಡನು.

"ಅಕ್ಕೋ ನೋಡು ! ಎಲ್ಲಾ ಇಲ್ಲಿಗೇ ಬರುತ್ತಿದ್ದಾರೆ ! ಗುಡ್ಡ ಏರುತ್ತಿದ್ದಾರೆ !" ಎಂದು ಚತುರ್ನೇತ್ರನು ತನ್ನ ಕೈ ಚಾಚಿ ತೋರುಬೆರಳನ್ನು ಗುಡ್ಡದ ಕೆಳಬದಿಗೆ ತೋರಿಸಿದನು. ಸಮರಸೇನನೂ ಸೈನಿಕರೂ ಅತ್ತ ನೋಡಿದರು. ಸುಮಾರು ಐವತ್ತು ಜನರ ಗುಂಪೊಂದು ದೀವಿಟಿಗಳನ್ನು ಬೆಳಗಿಸಿಕೊಂಡು ಏನೋ ಅರ್ಥವಾಗದಂತೆ ಕೂಗುತ್ತಾ ಮೇಲಕ್ಕೆ ಏರಿ ಬರುತ್ತಿದ್ದರು.

ಸಮರಸೇನನು ಕತ್ತಿಯ ಹಿಡಿಯ ಮೇಲೆ ಕೈ ಹಾಕಿ, "ಚತುರ್ನೇತ್ರಾ, ಈಗ ಮಾಡಬೇಕಾದ ಕರ್ತವ್ಯವೇನನ್ನುವೆ ? ಆ ಒಬ್ಬ ಕುಂಭಾಂಡನಾಗಿದ್ದರೆ ಈ ನನ್ನ ಸೈನಿಕರೊಂದಿಗೆ ಇದಿರಿಸಿ ಹತಮಾಡಬಹುದು. ಸುಶಿಕ್ಷಿತರಾದ ನನ್ನ ಸೈನಿಕರ ಬಾಣಗಳ ವೇಗಕ್ಕೆ ಆಟವಿಕರು ನಿಲ್ಲಲಾರರು. ಆದರೆ ಮಾಂತ್ರಿಕನಾದ ಏಕಾಕ್ಷಿಯನ್ನೇನು ಮಾಡಲಾದೀತು ? ಅವನನ್ನು ಪ್ರತೀಕರಿಸುವ ಶಕ್ತಿ ನಮಗಿಲ್ಲದೆ ಹೋಯಿತು. ಅದೇ ತಿಳಿಯಲಿಲ್ಲ" ಎಂದನು.

"ಆ ಏಕಾಕ್ಷಿಯ ಸಂಗತಿ ನನಗಿರಲಿ. ಆದರೆ ಒಂದು ವಿಷಯ ನೆನಪಿಟ್ಟುಕೋ ! ನೀನು ಈ ಕಾಡು ಗುಡ್ಡ ಪ್ರದೇಶದಲ್ಲಿ, ಈ ಕತ್ತಲೆಯಲ್ಲಿ ಕುಂಭಾಂಡನನ್ನು ಇದಿರಿಸುವುದು ಒಳ್ಳೆಯದಲ್ಲ. ಒಂದು ವೇಳೆ ಆ ಕುಂಭಾಂಡನೂ, ಆಟವಿಕರೂ ಏಕಾಕ್ಷಿಯ ಕಣ್ಣಿಗೆ ಬಿದ್ದು ಬಿಟ್ಟರೆ ನೀನು ಮಾಡಬೇಕೆಂದಿರುವ ಶತ್ರುಸಂಹಾರವನ್ನು ಅವನೇ ಮಾಡಿಬಡುತ್ತಾನೆ. ಅಷ್ಟರವರೆಗೆ ನಾವು ಸುಮ್ಮನೆ ಅಡಗಿಕೊಂಡು ಪ್ರೇಕ್ಷಕರಾಗಿದ್ದರೆ ತೀರಿಹೋಯಿತು" ಎಂದನು ಚತುರ್ನೇತ್ರ.

ಅವನು ಹೇಳಿ ಮುಗಿಸುವಷ್ಟರಲ್ಲೇ, ಉತ್ಸಾಹ ದಿಂದ ಘೋಷವೆಬ್ಬಿಸಿಕೊಂಡು ಗುಡ್ಡವೇರಿಬರುವ ಆಟವಿಕರನ್ನೂ, ಅವರ ಮುಂದಿನಿಂದಿದ್ದ ಕುಂಭಾಂಡ ನನ್ನೂ ಮತ್ತೊಂದು ಕಡೆಯಿಂದ ಧಾವಿಸಿ ಬಂದ ಏಕಾಕ್ಷಿ ಮಾಂತ್ರಿಕನು, ಅಟಕಾಯಿಸಿ ನಿಂತು, "ನಿಲ್ಲಿರಿ!" ಎಂದು ಕರ್ಕಶವಾಗಿ ಅರಚಿದನು. ಅವನ ಅಬ್ಬರವು ಬಂಡೆಗಳೊಂದಿಗೆ ಪ್ರತಿಧ್ವನಿಸಿತು.

ಅದನ್ನು ನೋಡಿ ಸಮರಸೇನನು ಸಂತೋಷ ದಿಂದ, "ಆಹ! ಇದೀಗ ಚೆನ್ನಾಗಿದೆ! ಇನ್ನು ಕುಂಭಾಂಡನ ಗತಿ ಮುಗಿದಂತೆಯೇ! ಈ ಕ್ಷಣವು ಯಾವಾಗ ಬರುವುದೋ ಅಂತಕಾದಿದ್ದೆ!" ಎಂದನು.

ಚತುರ್ನೇತ್ರನು ಅವನ ಸಂತೋಷವನ್ನು ಅಲ್ಲಗಳೆಯುತ್ತ, "ಸಮರಸೇನಾ, ಇಲ್ಲದ ಸಲ್ಲದ ಸಂತೋಷಕ್ಕೆ ಬಿದ್ದು ಬಿಡಬೇಡ. ಧನರಾಶಿಯಿಂದ ತುಂಬಿದ ನಾವೆ ಮತ್ತು ಅದರಲ್ಲಿರುವ ನಾಗಕನ್ಯೆಯ ವೃತ್ತಾಂತ ನಿನಗೆ ಸರಿಯಾಗಿ ತಿಳಿಯದು. ಅವುಗಳನ್ನು ಕುರಿತ ನಿಗೂಢ ರಹಸ್ಯವು ನಿನಗಿಂತ ಮೊದಲು ನನಗಾದರೂ ತಿಳಿಯುವಂತಿಲ್ಲ. ಈ ಏಕಾಕ್ಷಿ ದುಷ್ಟನಾದರೂ ಬುದ್ಧಿ ಹೀನನೇನಲ್ಲ. ಏನು ನಡೆಯುವುದೆಂದು ಹೊಂಚಿ ನೋಡೋಣ. ಬೇಗ ತಿಳಿದು ಬಿಡುತ್ತದೆ. ಆ ದೊಡ್ಡ ಬಂಡೆಯ ಹಿಂದೆ ಅಡಗಿರೋಣ, ಬನ್ನಿ ಹೀಗೆ" ಎಂದನು.

ಎಲ್ಲರೂ ಸದ್ದು ಮಾಡದೆ ಚತುರ್ನೇತ್ರನ ಹಿಂದೆಯೇ ಹೋದರು. ಕುಂಭಾಂಡನೂ ಆಟವಿಕರೂ ಇರುವ ಸ್ಥಳಕ್ಕೆ ಸಮೀಪದಲ್ಲಿದ್ದ ಹೆಬ್ಬಂಡೆಯ ಹಿಂದಿನ ಭಾಗದಲ್ಲಿ ಅಡಗಿ ಕುಳಿತು ನಡೆಯುವುದನು ಗಮನಿಸ ತೊಡಗಿದರು. ಅವರ ದೀವಿಟಿಗೆಯ್ನು ಬೆಳಕಿನಲ್ಲಿ ಎಲ್ಲರೂ ಕಾಣಿಸುತ್ತಿದ್ದರು.

ಅಷ್ಟರಲ್ಲಿ ಏಕಾಕ್ಷಿ ಮಾಂತ್ರಿಕನನ್ನು ನೋಡಿದ ಕೂಡಲೇ ಕುಂಭಾಂಡನು ತುಂಬಾ ಹೆದರಿದವನಾಗಿ ಕಂಪಿಸಿಕೊಂಡಿದ್ದನು. ಅವನ ಹಿಂದಿದ್ದ ಆಟವಿಕರು ಕೂಡಾ ಭೀತಿಯಿಂದ ಓಡಿಹೋಗಲು ಹವಣಿಸು ವಂತೆ ಕಾಣುತ್ತಿತ್ತು. ಅದನ್ನು ಕಂಡುಕೊಂಡ ಏಕಾಕ್ಷಿ ಗಟ್ಟಿಯಾಗಿ ನಗುವನ್ನು ಹಾರಿಸಿ, "ಯಾರಾದರೂ






ನಿಂತ ಸ್ಥಳದಿಂದ ಕದಲಿದರೆ ಸತ್ತು ಬೀಳುವಿರಿ. ಜಾಗ್ರತೆ! ನನ್ನ ಕಣ್ಣಿಗೆ ಬಿದ್ದ ಪ್ರಾಣಿ ನನ್ನ ಅಪ್ಪಣೆ ಇಲ್ಲದೆ ಕದಲಾಡಲು ಸಾಧ್ಯವಿಲ್ಲ" ಎಂದು ತಲೆ ತಿರುಗಿಸಿ ನೋಡಿ, "ಹೇ! ಕಾಲಭುಜಂಗಾ! ಕಪಾಲಾ! ಇವರನ್ನು ಮುತ್ತಿ ನೋಡಿಕೊಳ್ಳಿ!" ಎಂದು ಕಿವಿಗಳು ಸೀಳುವಂತೆ ಕೂಗಿದನು.

ಆ ಕೂಡಲೇ ಕಾಲಭುಜಂಗ ಮಹಾಸರ್ಪವು ಮುಂದಕ್ಕೆ ಹಾರಿ ಭುಸ್ ಭುಸ್ ಎನ್ನುತ್ತ ಆಟವಿಕರ ಸುತ್ತಲೂ ಪ್ರದಕ್ಷಿಣೆ ಬರತೊಡಗಿತು. ಮಾನವ ಕಪಾಲವು ಗಾಳಿಯಲ್ಲಿ ಗಿರ್ರನೆ ತಿರುಗುತ್ತ ಅವರ ತಲೆಯ ಮೇಲೆ ಆಡಲು ತೊಡಗಿತು. ಭಯಾತಿಶಯದಿಂದ ಸರ್ವಾಂಗವೂ ನಡುಗುತ್ತಿದ್ದ ಕುಂಭಾಂಡನನ್ನೂ, ಆಟವಿಕರನ್ನೂ ಕೆಂಗಣ್ಣಿನಿಂದ ನೋಡುತ್ತ ಏಕಾಕ್ಷಿ "ಯಾರು ನೀವು? ಏನು ನಿಮ್ಮ ಗದ್ದಲ? ಎಲ್ಲಿಗೆ ಹೀಗೆ ಹೊರಟಿದ್ದು?" ಎಂದು ಕೇಳಿದನು.

ಆ ಪ್ರಶ್ನೆಯನ್ನು ಕೇಳಿ ಕುಂಭಾಂಡನಿಗೆ ಇನ್ನಷ್ಟು ಭಯವೇ ಕವಿಯಿತು. ಅವನಿಗೆ ನಿಜವೋ ಸುಳ್ಳೋ ಯಾವುದನ್ನು ಹೇಳಿ ತಪ್ಪಿಸಿಕೊಳ್ಳುವುದೆಂದು ಗೊತ್ತಾಗಲಿಲ್ಲ. ಈ ದ್ವೀಪದಲ್ಲಿರುವ ಮಾಂತ್ರಿಕರನ್ನು ಕುರಿತು ಅವನು ಆಟವಿಕರ ಮುಖಾಂತರದಿಂದ ಕೇಳಿದ್ದನೇ ಹೊರತು ನೋಡುವುದು ಇದೇ ಮೊದಲು! ಇವನು ಭೂತಭವಿಷ್ಯಗಳನ್ನೆಲ್ಲ ಬಲ್ಲವನಾದರೆ ಸುಳ್ಳು ಹೇಳಿದರೆ ಬೂದಿ ಮಾಡಿ ಹಾರಿಸಿಬಿಡುವನೇನೋ?

ಏನೋ ಹೇಳಲೇಬೇಕಾಗಿ ಬಂದುದರಿಂದ ಸ್ವರವು ತಡವರಿಸುತ್ತಿರಲು, "ಸತ್ಯವೇ ಹೇಳುತ್ತೇನೆ. ಈ ಆಟವಿಕರ ರಾಜ ನಾನು. ನನ್ನ ಹೆಸರು ಕುಂಭಾಂಡ" ಎಂದಷ್ಟೇ ಹೇಳಿದನು.

"ಈ ಪ್ರಯಾಣ ಎಲ್ಲಿಗೆ?" ಎಂದು ಪುನಃ ಕೇಳಿದನು ಏಕಾಕ್ಷಿ. ಈಗ ನಿಜ ಹೇಳದೆ ಗತ್ಯಂತರವಿಲ್ಲವೆನಿಸಿತು ಕುಂಭಾಂಡನಿಗೆ. ಒಂದು ವೇಳೆ ತಾನು ನಿಜವನ್ನು ಮುಚ್ಚಿಟ್ಟುಕೊಂಡರೂ, ಪ್ರಾಣಭಯದಲ್ಲಿರುವ ಆಟವಿಕರು ನಿಜವನ್ನು ಹೇಳಿಯೇ ಬಿಡುವರೆಂದು ಅವನಿಗೆ ತೋರಿತು.

"ಅದು ಮತ್ತೇನಿಲ್ಲ. ಈ ಗುಡ್ಡದ ಶಿಖರದಿಂದ ನೋಡಿದರೆ ಸಮುದ್ರದಲ್ಲಿ ಒಂದು ನಾವೆ ಕಾಣುತ್ತದಂತೆ. ಅದನ್ನು ಕುರಿತು ಎಲ್ಲರೂ ಆಶ್ಚರ್ಯಕರವಾಗಿ ಹೇಳುವುವನ್ನು ಕೇಳಿ. ಅದನ್ನು ನೋಡೋಣವೆಂದು ಹೊರಟಿದ್ದೇವೆ." ಎಂದನು ಕುಂಭಾಂಡ.

ಅವನು ಹೇಳಿದುದನ್ನು ಕೇಳಿ ಏಕಾಕ್ಷಿ ಗಟ್ಟಿಯಾಗಿ ನಕ್ಕನು. ಈ ಆಟವಿಕರನ್ನು ಕಟ್ಟಿಕೊಂಡು ಕುಂಭಾಂಡನು ಏಕೆ ಹೊರಟಿದ್ದಾನೆಂಬುದು ಗೊತ್ತಾಗಿ ಹೋಯಿತು.

"ಭಲೆ ಭಲೆ! ಈ ಕತ್ತಲೆಯಲ್ಲಿ ದೀವಟಿಗೆ ಹಚ್ಚಿಕೊಂಡು ಈ ಗುಡ್ಡದ ಶಿಖರವನ್ನೇರಿ ಸಮುದ್ರವನ್ನು ನೋಡುವಿಯೇನು! ನಿನ್ನ ಬುದ್ಧಿವಂತಿಕೆ

ಅಪಾರವೇ ಸರಿ. ನಿನ್ನಂಥವನಿಗೆ ಈ ಅನಾಗರಿಕ ಕಾಡುಜನರ ಮೇಲೆ ರಾಜನೆಂಬ ಅಧಿಕಾರಕ್ಕಿಂತ, ದೇವತೆಗಳ ಮೇಲೆ ಅಧಿಕಾರ ಚಲಾಯಿಸುವ ಇಂದ್ರಪದವಿ ಮೇಲು. ನೀನು ಏತಕ್ಕಾಗಿ ಬಂದವನೆಂದು ನನಗೆ ಗೊತ್ತು. ಅದನ್ನು ನಿನ್ನ ಬಾಯಿಂದಲೇ ಕೇಳಬೇಕು. ಸತ್ಯ ಹೇಳು! ನೀನು ಆ ನಾವೆಯಲ್ಲಿರುವ ಧನ ರಾಶಿಯನ್ನು ಬಾಚಿಕೊಳ್ಳುವ ಉದ್ದೇಶದಿಂದಲೇ ಬಂದವನೆನ್ನು! ನಿಜತಾನೇ?" ಎಂದನು ಏಕಾಕ್ಷಿ.

ಕುಂಭಾಂಡನು ಗದಗದಿಸುತ್ತಾ ನೆಲವನ್ನು ನೋಡುತ್ತಿರಲು, ಏಕಾಕ್ಷಿ ಗದರಿಸುತ್ತಾ "ಹೌದೋ ಅಲ್ಲವೋ? ಬೇಗನೇ ಬೊಗಳಿಬಿಡು!" ಎಂದು ಗರ್ಜಿಸಿದನು.

"ಹೌದೂ..." ಎಂದನು ಕುಂಭಾಂಡ ನಡುಗುವ ಸ್ವರದಲ್ಲಿ. ಏಕಾಕ್ಷಿ ತೃಪ್ತಿಯಿಂದ ತಲೆಯಾಡಿಸಿ, "ಹೂಂ! ಈ ದ್ವೀಪದಲ್ಲಿ ಕೆಲವು ದಿನಗಳ ಕೆಳಗೆ ಐದಾರು ಮಂದಿ ಹೊಸಬರನ್ನು ನೋಡಿದ್ದೇನೆ. ಅವರ ವೇಷಭೂಷಣಗಳು ಕೂಡಾ ನಿನ್ನ ಹಾಗೇ ಇದ್ದುವು. ಅವರು ಕೂಡಾ ನಿನ್ನ ಹಾಗೇ ಆ ನಾವೆಯ ಐಶ್ವರ್ಯವನ್ನು ದೋಚಿಕೊಳ್ಳಲಿಕ್ಕೇ ಬಂದಿರಬೇಕು. ಅಥವಾ ನೀನು ಆ ಗುಂಪಿಗೆ ಸೇರಿದವನೇನೋ? ಗೊತ್ತೋ ನಿನಗೆ ಅವರು? ಎಲ್ಲಾ ಎಲ್ಲಿಂದ ಬಂದಿದ್ದೀರಿ? ಈ ನಾವೆಯ ಸಂಗತಿ ನಿಮಗೆ ಹೇಗೆ ಗೊತ್ತಾಯಿತು?" ಎಂದು ಕೇಳಿದನು.

ಏಕಾಕ್ಷಿಯ ಈ ಮಾತಿನಿಂದ ಆ ಮನುಷ್ಯರು ಯಾರೆಂಬುದು ಕುಂಭಾಂಡನಿಗೆ ಗೊತ್ತಾಯಿತು. ತನಗಿಂತ ಮೊದಲು ಕುಂಡಲಿನೀ ದ್ವೀಪ ರಾಜ್ಯದಿಂದ ಹೊರಟ ಸಮರಸೇನನೂ ಸೈನಿಕರೂ ಹೊರತು ಅವರು ಬೇರೆ ಯಾರೂ ಅಲ್ಲ. ಅವರನ್ನು ಈ ಮಂತ್ರವಾದಿ ಏನಾದರೂ ಮಾಡಿರಬೇಕು. ಅದೇ ಗತಿ ತನಗೂ ಆಗುತ್ತದೋ? ತಪ್ಪಿಸಿಕೊಳ್ಳಬೇಕು.




"ಅಲ್ಲ, ನಾನು ಆ ಗುಂಪಿಗೆ ಸೇರಿದವನೇನೂ ಅಲ್ಲ. ಆದರೆ ಅವರು ಯಾರೆಂಬುದು ನನಗೆ ಗೊತ್ತಿದೆ. ಅವರು ಈ ದ್ವೀಪದಲ್ಲಿರುವುದನ್ನು ತಿಳಿದ ಅವರನ್ನು ಅಂತ್ಯಗೊಳಿಸಲಿಕ್ಕಾಗಿಯೇ ನಾನು ಬಂದೆನು. ಧನಾಶೆ ತುಂಬಿದವರಾದ ಆ ದ್ರೋಹಿಗಳು ಆ ನಾವೆಯನ್ನು ಹುಡುಕುತ್ತಿರಬಹುದೆಂದು ತಿಳಿದೇ ನಾನು ಇಲ್ಲಿಗೆ ಬಂದೆನು. ದಾರಿಯಲ್ಲಿ ನಿಮ್ಮನ್ನು ಸಂಧಿಸುವ ಭಾಗ್ಯ ದೊರೆಯಿತು" ಎಂದು ಕುಂಭಾಂಡನು ತಂತ್ರದಿಂದ ನಿಜವನ್ನು ಬಚ್ಚಿಟ್ಟೇ ಹೇಳಿದನು.

ಈ ಸಂಭಾಷಣೆಗಳನ್ನು ಅಡಗಿಕೊಂಡು ಕೇಳುತ್ತಿದ್ದ ಚತುರ್ನೇತ್ರನು ಇದೇ ಸರಿಯಾದ ಸಮಯವೆಂದುಕೊಂಡು, "ಹೇ ಉಲೂಕಾ! ನರವಾನರಾ!" ಎಂದು ಗಟ್ಟಿಯಾಗಿ ಕೂಗುತ್ತ ಬಂಡೆಯ ಮರೆಯಿಂದ ಈಚೆಗೆ ಬಂದನು. ಬರುತ್ತಾ "ಹೂಂ! ಇದೇ ಸಮಯ!" ಎಂದು ಸಮರಸೇನನಿಗೂ ಸನ್ನೆಮಾಡಿದನು.




ಆ ಕೂಡಲೇ ಸಮರಸೇನನೂ ಸೈನಿಕರೂ ಬಿಲ್ಲಿಗೆ ಬಾಣ ಹೂಡಿ ಕುಂಭಾಂಡನ ಮೇಲೆಯೂ, ಆಟವಿಕರ ಮೇಲೆಯೂ ಪರಂಪರೆಯಾಗಿ ಬಾಣ ಬಿಡ ತೊಡಗಿದರು.

ಚತುರ್ನೇತ್ರನ ಸದ್ದು ಕೇಳುತ್ತಲೇ ಏಕಾಕ್ಷಿ ಬೆರಗಾಗಿ ಸುತ್ತಲೂ ನೋಡಿದನು. ಆಗಲೇ ಬಾಣ ಗಳಿಂದ ಪೆಟ್ಟುತಿಂದ ಕೆಲವರು ಆಟವಿಕರು ನೆಲಕ್ಕೆ ಹೊರಳಿದರು. ಕುಂಭಾಂಡನು ನಿಂತಲ್ಲಿಂದ ಕಪ್ಪೆಯಂತೆ ಹಾರಿ ಗುಡ್ಡವಿಳಿದು ಓಡ ತೊಡಗಿದನು. ಸಮರ ಸೇನನು ಅವನ ಬೆನ್ನುಹತ್ತಿದನು. ಪ್ರಾಣ ಭಯ ದಿಂದ ಓಡುವ ಆಟವಿಕರನ್ನು ಸೈನಿಕರು ಬೆಂಬತ್ತುತ್ತ ಬಾಣಗಳನ್ನು ಮೇಲಿಂದ ಮೇಲೆ ಬಿಡುತ್ತಲೇ ಇದ್ದರೂ, ಕತ್ತಲೆಯಾದುದರಿಂದ ಗುರಿ ಸರಿಯಾಗಿ ತಗಲುತ್ತಿರಲಿಲ್ಲ. ಕುಂಭಾಂಡನು ಕತ್ತಿ ಝಳಪಿಸುತ್ತ ತನ್ನ ಕಡೆಯ ಆಟವಿಕರನ್ನು ನೋಡಿ "ನಿಲ್ಲಿರಿ! ಓಡಬೇಡಿ!" ಎಂದು ಕೂಗಲು ತೊಡಗಿದನು.

ಇಲ್ಲಿ ಉಲೂಕದ ಹೆಸರು ಕೇಳಿ ದಿಗಿಲು ಬಿದ್ದ ಏಕಾಕ್ಷಿ ಮಾಂತ್ರಿಕನು, ಧೈರ್ಯದಿಂದ ಸ್ತಿಮಿತಕ್ಕೆ ಬಂದು, ಕತ್ತಿ ತಿರುಗಿಸುತ್ತ, ಸ್ವಲ್ಪ ಸ್ವಲ್ಪ ಮುಂದಕ್ಕೆ ಬರುತ್ತ, "ಎಲೋ ಚತುರಾ! ನೀನೊಬ್ಬ ಮೂಢ ನೆಂಬುದು ಈಗ ಗೊತ್ತಾಗಿ ಹೋಯಿತು. ಮಂತ್ರ ತಂತ್ರ ವಿದ್ಯೆಗಳಲ್ಲಿ ಲೋಕದಲ್ಲೇ ನಿನ್ನನ್ನು ಮಿಂಚಿ ದವರಿಲ್ಲವೆಂಬ ಗರ್ವದಿಂದ, ಈ ತುಚ್ಛ ಮಾನವಾ ಧಮರ ಬಾಣಗಳಿಂದ ನನ್ನನ್ನು ಜಯಿಸಲು ನೋಡುವೆಯಾ? ನಾನು ಹೂಂ ಅಂದರೆ ಸಾಕು. ನಿನ್ನ ಮಿತ್ರರೆಲ್ಲರನ್ನೂ ಕಡಿದು ಹಾಕಲು ಈ ಆಟವಿಕರೇ ಸಾಕು" ಎಂದನು.

ಚತುರ್ನೇತ್ರನು ರೆಪ್ಪೆ ಬಡಿಯದೆ ಏಕಾಕ್ಷಿಯನ್ನು ನೋಡುತ್ತ ಸುಮ್ಮನಿದ್ದನು. ಗುಡ್ಡದ ಕೆಳಗೆ ಕುಂಭಾಂಡನ ಕೂಗೂ, ಆಟವಿಕರ ಕೋಲಾಹಲ ಧ್ವನಿಯೂ ಜೋರು ಜೋರಾಗಿ ಕೇಳಿ ಬರತೊಡಗಿತು. ಈ ಕತ್ತಲೆಯಲ್ಲಿ ಪೋರಟರ ನಡುವೆ ಸಮರಸೇನನಿಗೆ ಏನಾದರೂ ಅಪಾಯ ಬರಬಹುದೇನೋ ಎಂದು ತೋರಿತು ಚತುರ್ನೇತ್ರನಿಗೆ.

"ಏಕಾಕ್ಷೀ! ನಿನ್ನ ಪೊಗರಿನ ಮಾತುಗಳಿಗೆ ಉತ್ತರ ಹೇಳುವಷ್ಟು ವ್ಯವಧಾನ ನನಗಿಲ್ಲ. ಅಷ್ಟೇ ಹೊರತು ನಮ್ಮ ಭೃತ್ಯಗಳ ನಡುವೆ ನಡೆಯುವ ಹೋರಾಟ ದಿಂದ ಬರುವ ಫಲಿತವೂ ಏನೂ ಇಲ್ಲ. ನಿನ್ನ ಕತ್ತಿ ಕಠಾರಿಗಳಾವುದೂ ನನ್ನನ್ನು ಏನೂ ಮಾಡಲಾರ ವೆಂದು ನಿನಗೆ ಗೊತ್ತೇ ಇದೆ. ಒಂದು ದಿನ ಬಂದೇ ಬರುತ್ತೆ. ಅಂದು ನೀನೋ ನಾನೋ ಎಂಬುದು ನಿರ್ಧಾರವೂ ಆಗುತ್ತೆ!" ಎಂದನು ಗಂಭೀರವಾಗಿ ಚತುರ್ನೇತ್ರ.

ಮತ್ತೊಂದು ಕ್ಷಣದಲ್ಲಿ ಚತುರ್ನೇತ್ರನ ಕೈ ಅವನ ತಲೆಯ ಕುಚ್ಚು ಟೋಪಿಯನ್ನು ಮುಟ್ಟಿತು, ಮರು ಕ್ಷಣದಲ್ಲಿ ಚತುರ್ನೇತ್ರನು ಅಲ್ಲಿ ಮಾಯವಾಗಿ, ಸಮರಸೇನನೂ, ಕುಭಾಂಡನೂ ಕಾದಾಡುವಲ್ಲಿ

ಪ್ರತ್ಯಕ್ಷನಾದನು. ಅಲ್ಲಿ ದಾರುಣವಾದ ರಣ ನಾಟಕ ನಡೆಯುತಲಿದ್ದಿತು. ಆಟವಿಕರು ಈಟಿ, ಭಲ್ಲೆಗಳನ್ನು ಬೀಸುತ್ತ ಮುಂದೆ ಬರಲು ನೋಡುತ್ತಿದ್ದರು. ಸಮರಸೇನನ ಸೈನಿಕರು ತಮ್ಮ ಬಾಣಗಳಿಂದ ಅವರನ್ನು ಮುಂದಕ್ಕೆ ಬಾರದಂತೆ ತಡೆಯುತ್ತಿದ್ದರು.

ಈ ಪರಿಸ್ಥಿತಿಯಲ್ಲಿ ಸಮರಸೇನನೂ, ಕುಂಭಾಂಡನೂ ಆ ಯುದ್ಧರಂಗದ ಮಧ್ಯದಲ್ಲಿ ತಮ್ಮೊಳಗೆ ಖಡ್ಗ ಯುದ್ಧ ಮಾಡುತ್ತಿದ್ದರು. ಆ ಹೊತ್ತಿಗೆ ಚಂದ್ರೋದಯವಾಗಿ ಆ ಪ್ರಾಂತವು ವಿಚಿತ್ರ ಬೆಳಕಿನಿಂದ ತುಂಬಿಕೊಂಡಿತು.

ಚತುರ್ನೇತ್ರನು ಸ್ವಲ್ಪ ದೂರದಲ್ಲಿ ನಿಂತು, ಈಗ ಏನು ಮಾಡುವುದೆಂದು ಆಲೋಚಿಸಿದನು. ಕುಂಭಾಂಡನನ್ನು ತನ್ನ ವಶಪಡಿಸಿಕೊಳ್ಳುವ ಆಲೋಚನೆಯಿಂದ ಏಕಾಕ್ಷಿ, ಕುಂಭಾಂಡನನ್ನು ರಕ್ಷಿಸಲು ಈ ಕಡೆಗೆ ಬರಬಹುದೆಂಬ ಅನುಮಾನವು ಚತುರ್ನೇತ್ರನಿಗೆ ಬಂದಿತು. ಆದುದರಿಂದ ಅವನು ಇಲ್ಲಿಗೆ ಬರುವುದಕ್ಕೆ ಮೊದಲೇ ಕುಂಭಾಂಡನನ್ನೂ, ಆಟವಿಕರನ್ನೂ ಹತ ಮಾಡಿ ಬಿಡುವುದೇ ಒಳ್ಳೆಯದೆಂದುಕೊಂಡನು. ಒಂದು ವೇಳೆ ಇದು ಸಾಧ್ಯವಾಗದಿದ್ದರೆ, ಸಮರಸೇನನನ್ನೂ ಅವನ ಸೈನಿಕರನ್ನೂ ಆ ಪ್ರದೇಶದಿಂದ ಇನ್ನೊಂದು ಸುರಕ್ಷಿತ ಪ್ರದೇಶಕ್ಕೆ ಕರೆದೊಯ್ದು ಬಿಡಬೇಕು. ಚತುರ್ನೇತ್ರನು ಹೀಗೆ ಆಲೋಚಿಸಿಕೊಂಡು, ಏನೋ ಮಾಡಬೇಕೆನ್ನುವಷ್ಟರಲ್ಲಿ, ಭಯಂಕರವಾಗಿ ತೋಳಗಳ ಕೂಗಾಟಗಳು ಕೇಳಬಂದುವು. ಬೆಳುದಿಂಗಳ ರಾತ್ರಿಯಲ್ಲಿ ಆಹಾರಾನ್ವೇಷಣೆಗೆ ಹೊರಬಂದ ತೋಳಗಳ ಗುಂಪೊಂದು ಇಲ್ಲಿಯ ರಕ್ತದ ವಾಸನೆ ಹಿಡಿದು ಈಕಡೆಗೆ ಬರುತ್ತಿತ್ತು.

ತೋಳಗಳ ಹಿಂಡು ಅರಚುತ್ತಾ, ಬಂಡೆಗಳ ಮೇಲಿಂದ ಹಾರುತ್ತಾ, ಪೊದರುಗಳಾಚೆಯಿಂದ ಓಡುತ್ತಾ ತಮ್ಮ ಕಡೆಗೆ ಬರುವುದನ್ನು ಎಲ್ಲರೂ ನೋಡಿದರು.

ಹಸಿದ ಆ ತೋಳಗಳು ತಮ್ಮನ್ನೇ ಕೊಲ್ಲುವುದೆಂಬ ಹೊಸ ಭೀತಿ ಎಲ್ಲರಿಗೂ ಉಂಟಾಯಿತು. ಆ ಕೂಡಲೇ ಹೋರಾಡಿಕೊಂಡಿದ್ದ ಆಟವಿಕರೂ ಸೈನಿಕರೂ ಅಲ್ಲಿಂದಲ್ಲೇ ತೋಳಗಳ ವಿರುದ್ಧವಾದ ದಿಕ್ಕಿಗೆ ಓಡತೊಡಗಿದರು.

ಸಮರಸೇನನೂ ಕುಂಭಾಂಡನೂ ತಮ್ಮೊಳಗಿನ ಯುದ್ಧವನ್ನು ನಿಲ್ಲಿಸಿ ತಮ್ಮ ಅನುಚರರು ಓಡುವ ದಿಕ್ಕನ್ನೇ ಹಿಡಿದು ಓಡತೊಡಗಿದರು. 'ಬೀಸುವ ದೊಣ್ಣೆಯ ಏಟು ತಪ್ಪಿದರೆ ಸಾಸಿರ ವರ್ಷ ಆಯುಸ್ಸು' ಎಂಬ ಹಾಗೆ ತೋಳಗಳು ಅಲ್ಲಿಯ ವರೆಗೆ ಬಂದರೆ, ಅಲ್ಲಿ ಬಿದ್ದಿದ್ದ ಶವಗಳ ರಕ್ತದಿಂದ ಅಲ್ಲಿಯೇ ಉಳಿದು, ತಮ್ಮ ಬೆನ್ನು ಹತ್ತಲಾರವೆಂದು ಓಡಿದವರಿಗೆಲ್ಲಾ ತೋರಿತ್ತು.

(ಇನ್ನೂ ಇದೆ)






# ಕನ್ನಡಿಯ ಮಹಿಮೆ

ಅದ್ಭುತ ಹೊರೆಯನ್ನು ಹೊತ್ತು ಮಹಾ ಭುಜ ಬಲನಾದ ರಾಜಾ ತ್ರಿವಿಕ್ರಮನು, ಮತ್ತೆ ಮರದ ಬಳಿಗೆ ಹೋಗಿ ಶವವನ್ನು ಮರದಿಂದಿಳಿಸಿ, ತನ್ನ ಭುಜದ ಮೇಲೇರಿಸಿಕೊಂಡು ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ಹೊರಟನು, ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ಎಲೈ ರಾಜನೇ, ನೀನು ಅದ್ಭುತ ಶಕ್ತಿಯನ್ನು ಸಾಧಿಸಿಕೊಂಡವನೆನ್ನಲು ಸಂದೇಹವಿಲ್ಲ ಆದರೆ ಈ ಅದ್ಭುತ ಶಕ್ತಿಯಿಂದ ಬಹಳ ಲಾಭವಿದೆಯೆಂದು ಎಲ್ಲರೂ ಅಂದುಕೊಳ್ಳುವರೇಕೋ ನನಗೆ ಗೊತ್ತಾಗುವುದಿಲ್ಲ. ಏಕೆಂದರೆ, ಹಾಗೆ ಅಂದುಕೊಂಡು ಹಾನಿಯನ್ನು ಅನುಭವಿಸಿದ ವಜ್ರಗಿರಿಯ ರಾಜನಾಗಿದ್ದ ಅಮರದೀಪನ ಕಥೆ ನೆನಪಿಗೆ ಬರುತ್ತದೆ. ನಡೆಯುವ ಶ್ರಮ ತಿಳಿಯದಂತೆ ನಿನಗೆ ಆ ಕಥೆಯನ್ನು ಹೇಳುತ್ತೇನೆ, ಕೇಳುತ್ತಾ ನಡೆಯುವಿಯಂತೆ" ಎಂದು ಕಥೆಯನ್ನು ಪ್ರಾರಂಭಿಸಿತು :

ವಜ್ರಗಿರಿಯ ರಾಜನಾದ ಅಮರದೀಪನಿಗೇನೋ ತಾನು ಆದರ್ಶ ರಾಜನಾಗಿ ಅಖಂಡ ಕೀರ್ತಿಗಳಿಸಬೇಕೆಂದು ತುಂಬಾ ಆಶೆಯಿತ್ತು. ಆದರೆ ಅದಕ್ಕೆ

ಬೇತಾಳ ಕಥೆಗಳು?...



ಬೇಕಾಗುವಷ್ಟು ಶಕ್ತಿ ಸಾಮರ್ಥ್ಯಗಳು ತನಗೆ ಸಾಲವೆಂದೂ ಅವನಿಗೆ ತೋರುತ್ತಿತ್ತು. ಆದುದರಿಂದ ಅವನು ಕಣ್ಣಿಗೆಬಿದ್ದ ಸನ್ಯಾಸಿಗಳೊಂದಿಗೆ, ತನ್ನ ಆಶಯವನ್ನು ತಿಳಿಸಿ ಅದಕ್ಕೆ ತಕ್ಕ ಅದ್ಭುತ ಶಕ್ತಿ ಅವರಿಂದ ಲಭಿಸುವುದೇನೋ ಎಂದು ನೋಡುತ್ತಿದ್ದನು. ಆದರೆ ಅವನ ಕೋರಿಕೆಗೆ ಸಹಾಯ ಲಭಿಸಲಿಲ್ಲ.

ಕಟ್ಟಕಡೆಗೆ ಒಂದು ದಿನ ಒಬ್ಬ ಸಾಧು ಅಮರದೀಪನ ದರ್ಶನಕ್ಕೆ ಬಂದನು. ಅವನು ರಾಜನಿಂದ ಸೇವೆಗಳನ್ನು ಸ್ವೀಕರಿಸಿ, ಅವನ ಆಶಯವನ್ನು ಕೇಳಿ, ತಲೆದೂಗಿ ಆಲೋಚಿಸಿದನು. ಆಮೇಲೆ ತನ್ನ ಜೋಳಿಗೆಯಿಂದ ಒಂದು ಕನ್ನಡಿಯನ್ನು ತೆಗೆದು ರಾಜನ ಕೈಗೆ ಕೊಟ್ಟು, "ರಾಜಾ, ಇದೊಂದು ಮಹಿಮೆಯುಳ್ಳ ಕನ್ನಡಿ. ರಾಜ ಕಾರ್ಯಗಳ ನಿರ್ವಹಣೆಗೆ ನಿನ್ನ ಕೈ ಕೆಳಗಿನವರೇ ಮುಖ್ಯರಾಗಿದ್ದಾರಷ್ಟೆ? ಇದು ಅಂಥವರ ಮೇಲೆ ಲಕ್ಷ್ಯವಿಟ್ಟಿರುತ್ತದೆ. ಇದು ನಿನಗೆ ಸಾವಿರಮಂದಿ ಗೂಢಚಾರರಿದ್ದ ಹಾಗೆ! ಯಾವ ಸಮಯದಲ್ಲೇ ಆಗಲಿ, ನಿನಗೆ ಯಾರ ಮೇಲಾದರೂ ಸಂದೇಹ ಬಂದರೆ, ಇದಿರಾಳಿಯ ಮನಸ್ಸು ತಿಳಿಯಬೇಕೆಂದಿದ್ದರೆ, ಅವನನ್ನು ನೆನೆದು ಈ ಕನ್ನಡಿಯನ್ನು ನೋಡು. ಅವನ ಮನಸ್ಸಿನಲ್ಲಿ ಏನಿದೆಯೋ ಅದು ನಿನಗೆ ಗೊತ್ತಾಗಿ ಬಿಡುತ್ತದೆ. ನಿನ್ನ ಆಶಯವು ಇದರಿಂದ ನೆರವೇರಬಹುದು. ಮುಖ್ಯವಾಗಿ ಅದು ನಿನ್ನ ಬುದ್ಧಿ ಸೂಕ್ಷ್ಮತೆಗೆ ಸೇರಿದ್ದು" ಎಂದನು.

ಅಮರದೀಪನಿಗೆ ಕನ್ನಡಿಯ ಮಹತ್ವ ತಿಳಿದು ತೃಪ್ತಿಯಾಯಿತು. ಇದರ ಸಹಾಯದಿಂದ ತಾನು ಚರಿತ್ರ ಪ್ರಸಿದ್ಧನಾದ ರಾಜನಾಗಬಹುದೆಂದು ಅಂದುಕೊಂಡನು. ಅವನು ಆ ಕನ್ನಡಿಯನ್ನು ಯಾರಿಗೂ ತೋರಿಸದೆ ಒಂದು ಕಡೆಯಲ್ಲಿ ಅಡಗಿಸಿಟ್ಟು, ಪೂರ್ತಿ ಅದನ್ನೇ ಆಧಾರ ಮಾಡಿಕೊಂಡು ರಾಜ ಕಾರ್ಯಗಳಿಗೆ ಅಪ್ಪಣೆ ಕೊಡ ತೊಡಗಿದನು. ತನ್ನ ಬುದ್ಧಿಯ ಉಪಯೋಗವನ್ನು ಕೂಡಾ ಬಿಟ್ಟನು. ಮಂತ್ರಿಗಳ ಆಲೋಚನೆ ಕೇಳುವ ಗೊಡವೆಗೂ ಹೋಗಲಿಲ್ಲ. ಕನ್ನಡಿ ಸಿಗುವುದಕ್ಕಿಂತ ಮೊದಲು ಕೆಲವರನ್ನು ಪೂರ್ತಿಯಾಗಿ ನಂಬಿ, ಅವರ ಆಲೋಚನೆಯ ಪ್ರಕಾರ ರಾಜ್ಯಪಾಲನೆ ಮಾಡುತ್ತಿದ್ದನು. ಆದರೆ ಈಗ ಅವನು ಯಾರನ್ನೂ ನಂಬಬೇಕಾದ ಅಗತ್ಯವಿರಲಿಲ್ಲ, ಎಲ್ಲರ ಆಲೋಚನೆಗಳನ್ನೂ ಕನ್ನಡಿ ಬಯಲುಪಡಿಸುತ್ತದೆ. ಅಂದಮೇಲೆ ಅವರನ್ನು ಕೇಳಿ ಆಲೋಚನೆಪಡೆಯುವ ಅಗತ್ಯವಿಲ್ಲವೆಂದು ರಾಜನಿಗೆ ತೋರಿತು. ಮಂತ್ರಿಗಳಿಗೆ ರಾಜನ ಪ್ರವರ್ತನೆಯಲ್ಲಿ ಬದಲಾವಣೆಯಾದುದು ಸ್ಪಷ್ಟವಾಗಿ ಗೊತ್ತಾಯಿತು. ಮೊದಲಿನ ಹಾಗೆ ರಾಜನು ತಮ್ಮ ಆಲೋಚನೆ ಕೇಳದೆ, ಏನೋ ಒಂದುನಿರ್ಣಯ ಮಾಡಿ ಅದನ್ನು ಅಮಲು ಗೊಳಿಸುವಂತೆ ತಮಗೆ ಆಜ್ಞೆ ಮಾಡುತ್ತಾನೆ. ಇದು ವಿಚಿತ್ರವೆನಿಸಿತು.

ಪ್ರಧಾನಮಂತ್ರಿಯಾದ ವಿಕ್ರಮಸೇನನಿಗೆ ತನ್ನ ಮೇಲೆ ಅನುಮಾನವಿರುವ ಸಂಗತಿ ಕನ್ನಡಿಯ

ಮೂಲಕ ರಾಜನಿಗೆ ಗೊತ್ತಾಯಿತು. ವಿಕ್ರಮಸೇನನಿಗೆ ತನ್ನ ಮೇಲೆ ಗೌರವವಿಲ್ಲವೆಂದೂ, ತನ್ನನ್ನು ಬುದ್ಧಿ ಕೆಟ್ಟ ಮೂಢನೆಂದು ನೆನೆಯುತ್ತಾನೆಂದೂ ಅಮರದೀಪನಿಗೆ ಗೊತ್ತಾಯಿತು. ಕೂಡಲೇ ಅವನು ಪ್ರಧಾನಮಂತ್ರಿಯ ಮೇಲೆ ರಾಜದ್ರೋಹಿ ಎಂಬ ಆಪಾದನೆ ಹೇರಿ ಕಾರಾಗೃಹದಲ್ಲಿ ಇರಿಸಿದನು.

ಇದಾದಮೇಲೆ ಅನೇಕ ರಾಜೋದ್ಯೋಗಿಗಳಿಗೆ ರಾಜನ ವಿವೇಕದ ಮೇಲೆ ಸಂದೇಹ ಉಂಟಾಯಿತು. ಎಲ್ಲರೂ ರಾಜನ ಅನುಮಾನಕ್ಕೆ ಪಾತ್ರರಾದರು. ಅವರೆಲ್ಲರ ಆಲೋಚನೆಗಳನ್ನೂ ಅದ್ಭುತ ಕನ್ನಡಿಯಿಂದ ರಾಜನು ಅರಿತುಕೊಂಡು ಅಂಥವರನ್ನೆಲ್ಲಾ ಸೆರೆಮನೆಯಲ್ಲಿ ಹಾಕಿಸಿ ಬಿಟ್ಟನು.

ಅಷ್ಟರಲ್ಲಿ ದೇಶದೊಳಗೆಲ್ಲಾ ಏನೋ ಒಂದು ಕಲವರವೆದ್ದಿತು. ಪ್ರಜೆಗಳಲ್ಲಿ ಶಾಂತಿಯನ್ನು ನೆಲೆಗೊಳಿಸುವ ಭಾರವನ್ನು ಸೇನಾಧಿಪತಿಯ ಮೇಲೆ ಹಾಕಬೇಕೆಂದುಕೊಂಡು, ಅಮರದೀಪರಾಜನು ತನ್ನನ್ನು ಕುರಿತು ಸೇನಾಧಿಪತಿ ಏನು ಭಾವಿಸುವನೆಂದು ಕನ್ನಡಿಯನ್ನು ನೋಡಿದನು, ರಾಜನಿಗೆ ಅತ್ಯಾಶ್ಚರ್ಯವಾಯಿತು. ಅದರೊಂದಿಗೆ ಗಾಬರಿಯೂ ಆಯಿತು. ತನ್ನ ಸೇನಾಧಿಪತಿ ನೆರೆದೇಶದ ರಾಜನೊಂದಿಗೆ ಸಂಚು ನಡೆಸಿ, ಅಮರದೀಪನನ್ನು ರಾಜ್ಯ ಭ್ರಷ್ಟನನ್ನಾಗಿ ಮಾಡಲು ಹವಣಿಸುತ್ತಿದ್ದಾನೆ ! ಈ ಕನ್ನಡಿ ಇಲ್ಲದಿರುತ್ತಿದ್ದರೆ ತನ್ನ ಗತಿ ಏನಾಗುತಿತ್ತೋ !

ಇನ್ನೇನು ? ಮರುಕ್ಷಣದಲ್ಲಿ ರಾಜನು ಸೇನಾಧಿಪತಿಯನ್ನು ಕೂಡಾ ಸೆರೆಮನೆಗೆ ಸೇರಿಸಿ ಬಿಟ್ಟನು. ಇಷ್ಟಾದ ಮೇಲೆ ವಜ್ರಗಿರಿಯ ಪ್ರಜೆಗಳಿಗೆ ಯಾವ ಸಂದೇಹವೂ ಉಳಿಯಲಿಲ್ಲ. ಅವರು ತಮ್ಮ ರಾಜನಿಗೆ ಪೂರ್ತಿಯಾಗಿ ಬುದ್ಧಿ ಕೆಟ್ಟಿತೆಂದುಕೊಂಡರು. ತಮ್ಮ ರಾಜನು ಸಿಂಹಾಸನದಲ್ಲಿ ಕುಳಿತುಕೊಳ್ಳಲು ಅರ್ಹನಲ್ಲವೆಂದು ಬಹಿರಂಗವಾಗಿಯೇ ಪ್ರಜೆಗಳು ಮಾತಾಡಿಕೊಳ್ಳ ತೊಡಗಿದರು.

ಇದು ಅಮರದೀಪನಿಗೆ ಗೊತ್ತಾಗಿ, ತಬ್ಬಿಬ್ಬಾದನು. ಏನು ಮಾಡಲೂ ತೋರದೆ ತನ್ನ ಮಗನ ಆಲೋಚನೆ ಕೇಳೋಣವೆಂದುಕೊಂಡು ಕನ್ನಡಿ





ಯನ್ನು ತೆಗೆದು ನೋಡಿದನು. ಆಗ ಅಮರದೀಪನಿಗೆ ಮೂರ್ಛೆಬರುವುದಷ್ಟೇ ಬಾಕಿ! ಮಗನ ಮನಸ್ಸಿನ ಆಲೋಚನೆಗಳು ಕನ್ನಡಿಯಲ್ಲಿ ಸ್ಪಷ್ಟವಾಗಿ ಕಂಡಿತು. ತನ್ನ ತಂದೆಯನ್ನು ಯಾವ ರೀತಿಯಲ್ಲಾದರೂ ಕೊಲೆಮಾಡಿಸುವುದು ಒಳ್ಳೆಯದೋ, ಅಥವಾ ಅವನನ್ನು ಸೆರೆಮನೆಯಲ್ಲಿ ಹಾಕಿ, ತಾನು ಪಟ್ಟಾಭಿಷೇಕ ಮಾಡಿಸಿಕೊಳ್ಳುವುದು ಒಳ್ಳೆಯದೋ ಎಂದು ಕುಮಾರ ಕಾಂತಿದೀಪನು, ತಂದೆಯ ಮೇಲೆ ಪ್ರಜೆಗಳಿಗೆ ಕೋಪ ಬರುವಂತಹ ಆಪಾದನೆಗಳನ್ನು ಕುರಿತು ತೀವ್ರವಾಗಿ ಆಲೋಚಿಸಿ ಕೊಂಡಿದ್ದಾನೆ!

ತನ್ನ ಮಗನ ಮನಸ್ಸು ಕೂಡಾ ತನ್ನ ಮೇಲೆ ರೋಸಿ ಹೋಗುವಂತಾದ ಮೇಲೆ, ತಾನು ಪ್ರಜೆಗಳನ್ನು ಆದರ್ಶ ಪ್ರಭುವಾಗಿ ಪಾಲಿಸುವೆನೆಂಬುದು ಬರೀ ಹಗಲು ಗನಸೇ ಸರಿ!

ಈಗ ಅಮರದೀಪರಾಜನು ಒಂದು ನಿರ್ಧಾರಕ್ಕೆ ಬಂದು, ತನ್ನ ಮಗನನ್ನು ಕರೆದು, "ಕಂದಾ ನನ್ನ ಮನಸ್ಸು ಸರಿಯಿಲ್ಲ. ಮನಸ್ಸು ಕೆಟ್ಟದೆಯೆಂದು ತಿಳಿದಾಗಲೇ ಮುಂಜಾಗ್ರತೆಪಡಬೇಕು. ಅಂತೆಯೇ ಇನ್ನುಮೇಲೆ ನಾನೇ ರಾಜ್ಯಪಾಲನೆಯ ಭಾರವನ್ನಿಟ್ಟುಕೊಂಡಿದ್ದರೆ ಪ್ರಜೆಗಳಿಗೆ ಕ್ಷೇಮವಿಲ್ಲ. ರಾಜ್ಯಪಾಲನೆ ಇನ್ನು ನನ್ನಿಂದಾಗದು. ನಾಳೆಯೇ ನಿನಗೆ ಪಟ್ಟಾಭಿಷೇಕ ಮಾಡಿ ನಾನು ಅರಣ್ಯಕ್ಕೆ ಹೋಗಿ ತಪಸ್ಸಿನಲ್ಲಿರುತ್ತೇನೆ" ಎಂದು ಆ ದಿನವೇ ತಾನು ಅದುವರೆಗೆ ಸೆರೆಯಲ್ಲಿ ಸೇರಿಸಿದವರೆಲ್ಲರನ್ನೂ ಬಿಡುಗಡೆ ಮಾಡಿಸಿ ಅವರೆಲ್ಲರೊಂದಿಗೂ ಕ್ಷಮೆ ಕೇಳಿದನು.

ಮರುದಿನವೇ ಕಾಂತಿದೀಪನು ಪಟ್ಟಾಭಿಷಿಕ್ತನಾಗಿ ರಾಜನಾದನು. ಅಮರದೀಪನು ಮಹಿಮೆಯ ಕನ್ನಡಿಯನ್ನು ಯಾರಿಗೂ ಗೊತ್ತಾಗದಂತೆ ಪುಡಿಪುಡಿ ಮಾಡಿ ಬಿಸುಟು, ಕಾಷಾಯ ವಸ್ತ್ರಗಳನ್ನು ಧರಿಸಿ ತಪಸ್ಸು ಮಾಡಲು ಅರಣ್ಯಕ್ಕೆ ಹೊರಟು ಹೋದನು. ಈ ಪರಿಣಾಮವನ್ನು ನೋಡಿ ಪ್ರಜೆಗಳಿಗೆ ಆಶ್ಚರ್ಯವೂ ಸಂತೋಷವೂ ಆಯಿತು, ಚೆನ್ನಾಗಿದ್ದ ರಾಜನಿಗೆ ಈಮಧ್ಯ ಏಕೆ ಹಾಗೆಲ್ಲಾ ಪ್ರವರ್ತಿಸುವಂತಾಯಿತೆಂದು ಯಾರಿಗೂ ತಿಳಿಯದು. ಈ ವಿಚಿತ್ರ ಸಂಗತಿಯನ್ನು ಬಹಳ ಕಾಲದವರೆಗೆ ಪ್ರಜೆಗಳು ಹೇಳಿಕೊಂಡಿದ್ದರು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜನೇ! ಅಷ್ಟೊಂದು ಅಪೂರ್ವವಾದ ಕನ್ನಡಿಯನ್ನು ಒಡೆದು ಬಿಸುಟು, ಕಾಷಾಯ ವಸ್ತ್ರಧಾರಣೆ ಮಾಡಿ ಅಮರದೀಪನು ಅಡವಿಗೆ ಹೋಗುವಂತಾಗಲು ಕಾರಣವೇನು? ಅದು ರಾಜನದೇ ತಪ್ಪೋ? ಕನ್ನಡಿಯ ತಪ್ಪೋ? ತನಗೆ ಉಪಯೋಗವಾಗದ ಕನ್ನಡಿ ತನ್ನ ಮಗನಿಗಾದರೂ ಉಪಯೋಗಪಡುವಂತೆ ಇಡಬಹುದಿತ್ತಲ್ಲಾ? ಅದರಿಂದ ಇದಿ ರಾಳಿಯ ಕೆಡುಕನ್ನರಿತು ತನ್ನ ಮಗನು ತನಗಿಂತ ಹೆಚ್ಚಿನ ಹೆಸರು ಪಡೆಯುವನೆಂದು ರಾಜನಿಗೆ ಅಸೂಯೆಯಾಯಿತೇನು? ಮಗನೇ ತನ್ನನ್ನು ಕೊಲೆಮಾಡಲು

ಯೋಚಿಸುವುದನ್ನು ತಿಳಿದು ವೈರಾಗ್ಯ ತಾಳಿದನೇನು ? ಈ ಅನುಮಾನಗಳಿಗೆ ತಕ್ಕ ಸಮಾಧಾನ ತಿಳಿದು ಕೂಡಾ ಹೇಳದೆ ಹೋದರೆ ನಿನ್ನ ತಲೆ ಸಾವಿರ ಹೋಳಾಗುತ್ತದೆ !" ಎಂದಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು : "ಕನ್ನಡಿಯಲ್ಲಿ ಯಾವ ಅದ್ಭುತಶಕ್ತಿ ಇದ್ದರೂ ಆದರ್ಶವಾದ ರಾಜ್ಯಪಾಲನೆಗೆ ಸಹಕರಿಸುವ ಶಕ್ತಿ ಮಾತ್ರ ಅದಕ್ಕಿಲ್ಲ. ಅದು ಮಾನವರ ಆಲೋಚನೆಗಳನ್ನು ತಿಳಿಯಪಡಿಸುತ್ತದೆ. ರಾಜನು ತನಗೆ ಯಾರ ಮೇಲಾದರೂ ಅನುಮಾನ ಬಂದಾಗಲೇ ಕನ್ನಡಿಯಲ್ಲಿ ನೋಡಿ ತಿಳಿಯುತ್ತಾನೆ. ಅವು ಸಹಜವಾಗಿ ರಾಜನಿಗೆ ವ್ಯತಿರೇಕವಾಗಿಯೇ ಇರುತ್ತವೆ. ಯಾವ ಕಾರಣವೂ ಇಲ್ಲದೆ ರಾಜನು ಯಾರನ್ನೂ ಸಂದೇಹಿಸಲಾರನಷ್ಟೆ ? ಸಾಧಾರಣವಾಗಿ ರಾಜೋದ್ಯೋಗಿಗಳ ಮನಸ್ಸಿನಲ್ಲಿ ಅವರ ಸ್ವಂತ ಸಮಸ್ಯೆಗಳು ತಿರುಗಿಕೊಂಡಿರುತ್ತವೆಯೇ ಹೊರತು, ರಾಜನ ಪರಿಪಾಲನೆಗೆ ಹೇಗೆ ಸಹಕರಿಸುವುದೆಂಬುದನ್ನು ಆಲೋಚಿಸಿಕೊಂಡಿರಲಾರರು. ಆ ಕನ್ನಡಿ ಉದ್ಯೋಗಸ್ಥರ ಶಕ್ತಿಸಾಮರ್ಥ್ಯಗಳನ್ನು ಕುರಿತು ಹೇಳುವಂಥದಲ್ಲ, ರಾಜನಿಗೆ ನಿಜಕ್ಕೂ ಉಪಯೋಗ ಬೀಳುವಂಥಾದ್ದು ಕೈಕೆಳಗಿನವರ ಶಕ್ತಿ ಸಾಮರ್ಥ್ಯಗಳೇ ಹೊರತು ಅವರ ಆಲೋಚನೆಗಳಲ್ಲ. ಹೀಗಿರುವಾಗ ಮನುಷ್ಯರ ಮನದಲ್ಲಿರುವ ಸಾವಿರಾರು ಆಲೋಚನೆಗಳು ಆಚರಣೆ ಬರುವಂಥವೂ ಅಲ್ಲ. ಅದರಂತೆಯೆ ರಾಜನನ್ನು ಕುರಿತು ಅವರು ವಿಕಲ್ಪವಾಗಿ ಆಲೋಚಿಸಿಕೊಂಡಿರುವಾಗ, ತನಗೆ ಅವರು ದ್ರೋಹ ಬಗೆಯುತ್ತಿರುವಂತೆ ರಾಜನಿಗೆ ತೋರಿತು. ಮಹಿಮೆಯ ಕನ್ನಡಿ ಅಮರದೀಪನಿಗೆ ಮಾಡಿದ ದೊಡ್ಡ ದ್ರೋಹವೆಂದರೆ ಅದೇ, ಅದರಿಂದಾದ ಚಿಕ್ಕ ದ್ರೋಹವೇನೆಂದರೆ, ರಾಜನು ಸಮರ್ಥತೆಯಿಂದ ರಾಜ್ಯಪಾಲನೆ ಮಾಡಲು ಯಾವ ಮಾರ್ಗ ಅನುಸರಿಸಬೇಕೋ ಅದನ್ನೆಲ್ಲಾ ಆ ಕನ್ನಡಿಯೇ ಆಕ್ರಮಿಸಿಕೊಂಡಿತು. ರಾಜನ ಬುದ್ಧಿಶಕ್ತಿಗೆ ಚಾಲನೆಯೇ ಇಲ್ಲದಂತಾಯಿತು. ಅದರ ಫಲಿತವಾಗಿ ಆದರ್ಶಪಾಲಕನಾಗಬೇಕೆಂದು ಕೊಂಡವನು ಅಧಮ ಪಾಲಕನಾದನು. ಸನ್ಯಾಸಿ ಮುಖ್ಯವೆಂದು ಹೇಳಿದ ಬುದ್ಧಿ ಸೂಕ್ಷ್ಮತೆ ರಾಜನಿಗೆ ಬರಲೇ ಇಲ್ಲ. ಅದನ್ನು ಕುರಿತು ಲಕ್ಷಿಸಲೇ ಇಲ್ಲ. ಆ ಕನ್ನಡಿ ತನ್ನ ಮಗನಿಗೆ ಕೂಡಾ ಇದೇ ಗತಿಯನ್ನು ತರಬಹುದೆಂದು ಅಂಜಿಯೇ ರಾಜನು ಅದನ್ನು ಒಡೆದು ಬಿಸುಟು ಅರಣ್ಯಕ್ಕೆ ಹೋದನು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಎಂದಿನಂತೆ ಮರದ ಕೊಂಬೆಯನ್ನು ಸೇರಿ ನೇತಾಡಿಕೊಂಡಿತು.





# ದೇವರ ಧನ

ರಾಮಾಪುರದ ಶ್ರೀರಾಮ ದೇವಾಲಯದಲ್ಲಿ ಪ್ರತಿ ವರ್ಷವೂ ರಾಮನವಮಿಯ ದಿನದಲ್ಲಿ ಉತ್ಸವ ನಡೆಯುವ ಪದ್ಧತಿಯಿದ್ದಿತು. ಅದಕ್ಕಾಗಿ ಊರವರೆಲ್ಲಾ ಚಂದಾ ಹಾಕುತ್ತಿದ್ದರು.

ದೇವಾಲಯದ ಧರ್ಮಕರ್ತರೊಳಗೆ ವೈಶಾಖನೆಂಬವನು ಬಹಳ ಪ್ರಾಮಾಣಿಕನಾಗಿರುವ ಸಂಗತಿ ಎಲ್ಲರಿಗೂ ಗೊತ್ತಿತ್ತು. ಉತ್ಸವಕ್ಕೆ ಆರು ತಿಂಗಳ ಮೊದಲಿನಿಂದಲೇ ವಸೂಲಿಗೆ ಪ್ರಾರಂಭವಾಗಿ ಮೂರು ನಾಲ್ಕು ತಿಂಗಳೊಳಗೆ ಎಲ್ಲವೂ ವಸೂಲಾಗುತಿತ್ತು. ಆ ಧನವನ್ನು ಧರ್ಮಕರ್ತರಲ್ಲಿ ಒಬ್ಬರು ಇಟ್ಟುಕೊಳ್ಳುತ್ತಿದ್ದರು. ಈಸಾರಿ ವಸೂಲಾದ ಹಣವನ್ನು ವೈಶಾಖನ ಹತ್ತಿರವೇ ಇರಿಸಬೇಕೆಂದು ಒಬ್ಬಿಬ್ಬರ ಹೊರತು ಎಲ್ಲ ಧರ್ಮಕರ್ತರೂ ಹೇಳಿದರು. ಅಂತಲೇ ವೈಶಾಖನು ಆ ಧನವನ್ನು ತನ್ನ ಹತ್ತಿರ ಇರಿಸಿಕೊಂಡನು.

ದೇವಾಲಯದ ಧರ್ಮಕರ್ತರಲ್ಲಿ ಭದ್ರಕನೆಂಬ ಧನಿಕನೊಬ್ಬನಿದ್ದನು. ಅವನು ಹೊಸದಾಗಿ ಧರ್ಮಕರ್ತನಾಗಿ ಆರಿಸಲ್ಪಟ್ಟ ದೊಡ್ಡ ಮನುಷ್ಯ. ತಾನು ಧನಿಕನೆಂಬ ಗರ್ವ ತುಂಬಾ ಅವನಿಗಿತ್ತು. ಅಂತಲೇ ದೇವರ ಹಣವನ್ನು ತನ್ನ ಹತ್ತಿರ ಒಪ್ಪಿಸದೆ ವೈಶಾಖನ ಹತ್ತಿರ ಒಪ್ಪಿಸಿದುದನ್ನು ನೋಡಿ ಅವನಿಗೆ ಸ್ವಲ್ಪ ಸಿಟ್ಟಿಗೆ ಕಾರಣವಾಯಿತು.

ಅವನು ಯಾರೊಂದಿಗೋ ತನ್ನ ಅಸಂತೃಪ್ತಿಯನ್ನು ಹೇಳಿಕೊಂಡ ಸಂಗತಿ ವೈಶಾಖನಿಗೆ ಗೊತ್ತಾಯಿತು. ಅವರನ್ನು ನೋಯಿಸುವುದೇಕೆಂದುಕೊಂಡು, ವೈಶಾಖನು ಧನದ ಚೀಲವನ್ನು ಒಯ್ದು ಭದ್ರಕನಿಗೆ ಕೊಟ್ಟು, "ಈ ಧನವು ನನ್ನ ಹತ್ತಿರ ಇರುವುದಕ್ಕಿಂತ ನಿಮ್ಮ ಹತ್ತಿರ ಇದ್ದರೇನೇ ಭದ್ರವಾಗಿರುತ್ತದೆ. ಇದರ ಅಗತ್ಯಬರುವವರೆಗೆ ನಿಮ್ಮ ಹತ್ತಿರವೇ ಇರಲಿ" ಎಂದನು.

ಇತರರು ತನಗೆ ಗೌರವಕೊಡದಿದ್ದರೂ ವೈಶಾಖನು ತನ್ನ ದೊಡ್ಡ ತನವನ್ನು ಗುರುತಿಸಿದುದಕ್ಕಾಗಿ ತೃಪ್ತಿಗೊಂಡು ಭದ್ರಕನು ಅದನ್ನು ತೆಗೆದು ಒಳಗಿಟ್ಟುಕೊಂಡನು.

ಭದ್ರಕನ ಮಗನು ದರ್ವ್ಯಸನಿಯಾಗಿದ್ದನು. ಅವನಿಗೆ ಜೂಜಾಡುವುದರ ಹೊರತು ಬೇರೆ ಕೆಲಸವೇ ನಿರಲಿಲ್ಲ. ವೈಶಾಖನು ತನ್ನ ತಂದೆಯ ಹತ್ತಿರ ಹಣದ ಚೀಲವನ್ನು ಕೊಟ್ಟು ಹೋದ ಸಂಗತಿ

ಬಿ. ಎ. ರಾವ್

ಅವನಿಗೆ ತಿಳಿಯಿತು. ಎಷ್ಟು ಹಣವಾದರೂ ಅವನಿಗೆ ಬೇಕಾಗಿತ್ತು. ಅವನು ಸಮಯ ನೋಡಿ ತಂದೆ ಇಟ್ಟ ಜಾಗದಿಂದ ಅದನ್ನು ತೆಗೆದುಕೊಂಡು ಬಿಟ್ಟನು.

ಎರಡು ದಿನಗಳ ಮೇಲೆ ಊರ ಹಿರಿಯರೆಲ್ಲ ಸಮಾವೇಶಿತರಾಗಿ, ಉತ್ಸವದ ಕಾರ್ಯಕ್ರಮಗಳ ಪಥಕ ಹಾಕಿ, ಹಣವನ್ನು ತರುವಂತೆ ವೈಶಾಖನಿಗೆ ಹೇಳಿದರು.

ವೈಶಾಖನು ಭದ್ರಕನ ಬಳಿಗೆ ಹೋಗಿ "ಸಮಯ ಬಂತು. ದೇವಾಲಯಕ್ಕೆ ಸಂಬಂಧಿಸಿದ ಆ ಧನದ ಚೀಲ ಕೊಡಿರಿ" ಎಂದು ಕೇಳಿದನು. ಅದು ಇಟ್ಟಲ್ಲಿಂದ ಮಾಯವಾಗಿರುವುದನ್ನು ತಿಳಿದಿದ್ದ ಭದ್ರಕನು, ತನ್ನ ಮಗನು ಅದನ್ನು ಕರ್ಪೂರದ ಹಾಗೆ ಪೂರ್ತಿ ಮಾಯಮಾಡಿರುವನೆಂದೂ ಅರಿತಿದ್ದನು. ಇನ್ನು ಕೊಡುವುದಾದರೆ ತನ್ನ ಸ್ವಂತ ಹಣವನ್ನೇ ಕೊಡಬೇಕು ! ಹಾಗೆ ಮಾಡಲು ಭದ್ರಕನಿಗೆ ಸುತರಾಂ ಇಷ್ಟವಿಲ್ಲ. ವೈಶಾಖನು ತನ್ನ ಹತ್ತಿರ ಹಣದ ಚೀಲ ಕೊಟ್ಟುದಕ್ಕೆ ಯಾವ ದಾಖಲೆಯೂ ಇಲ್ಲವಷ್ಟೆ ? ಆದುದರಿಂದ ಭದ್ರಕನು, ತನಗೇನೂ ಗೊತ್ತಿಲ್ಲವೆಂದು ಸಾಹಸಮಾಡಿ ಹೇಳಿ ಬಿಟ್ಟನು.

ವೈಶಾಖನ ಗುಂಡಿಗೆಗೆ ಕಲ್ಲೇ ಬಿದ್ದಿತು. ಈಗ ಹಿರಿಯರಿಗೆ ತಾನು ಏನೆಂದು ಉತ್ತರ ಕೊಡಬೇಕು ? ಅಷ್ಟೂ ಹಣ ಕೊಡಲು ತನ್ನಿಂದ ಹೇಗೆ ಸಾಧ್ಯ ? ಕೊಡದೇ ಹೋದರೆ ಎಲ್ಲರೂ ತನ್ನನ್ನು ಕುರಿತು ಏನಂದು ಕೊಂಡಾರು ?

ಕಡೆಗೆ ವೈಶಾಖನು ಧೈರ್ಯಮಾಡಿ ಹಿರಿಯರ ಮುಂದೆ ನಡೆದ ಸತ್ಯಸಂಗತಿಯನ್ನೆಲ್ಲಾ ಹೇಳಿ ಬಿಟ್ಟನು. ಅದನ್ನು ಯಾರೂ ಒಪ್ಪಲಿಲ್ಲ. ಭದ್ರಕನು ಜಿಪುಣ ಗುಣದವನಾದರೂ ದೊಡ್ಡ ಮನುಷ್ಯನೆಂಬ ಹೆಸರೇನೋ ಇದ್ದಿತು. ಆದುದರಿಂದ ಯಾರೂ ವೈಶಾಖನ ಮಾತನ್ನು ನಂಬಲಿಲ್ಲ.

"ಹೇಗಾದರೂ ನಾಳೆ ಹಣದ ಚೀಲ ಬಾರ ದಿದ್ದರೆ ಬಹಳ ಕಷ್ಟಬರುತ್ತದೆ" ಎಂದು ಹಿರಿಯರು ವೈಶಾಖನೊಂದಿಗೆ ಹೇಳಿದರು. ಹಣ ಕೊಡಬೇಕಾಗಿ ಬಂದುದು ಮಾತ್ರವಲ್ಲದೆ,



ಕೆಟ್ಟ ಹೆಸರು ಕೂಡಾ ಬಂದಿತಲ್ಲಾ ಎಂದು ವೈಶಾಖನು ವ್ಯಸನದಿಂದ ಅಂಧಕಾರಕ್ಕೆ ಬಿದ್ದವನಾದನು.

ಭದ್ರಕನ ಮಗನು ತಾನು ಕಳವು ಮಾಡಿದ ಹಣವನ್ನು ಕೂಡಲೇ ಖರ್ಚು ಮಾಡದೆ, ತಂದೆ ಕೇಳುವರೇನೋ ಎಂಬ ಅನುಮಾನದಲ್ಲಿ ಒಂದು ದಿನವಿಡೀ ಸುಮ್ಮನಿದ್ದನು. ತಂದೆಯಿಂದ ಆ ಹಣದ ಚೀಲದ ಪ್ರಸ್ತಾಪವೇನೂ ಬಾರದಿರಲು, ಆ ಹಣ ವನ್ನು ಇಟ್ಟು ಮಿತ್ರಿಬ್ಬರೊಂದಿಗೆ ಜೂಜಾಡಿದನು. ಅದರಲ್ಲಿ ಇವನ ಹಣವೆಲ್ಲಾ ಅವರಲ್ಲಿ ಒಬ್ಬನಿಗೆ ಸೇರಿಹೋಯಿತು.

ಭದ್ರಕನು ಬರಿಗೈಯಲ್ಲಿ ತಲೆಗೆ ಮುಸುಗು ಹಾಕಿ ಕೊಂಡು ಮನೆಗೆ ಹೋದನು. ಅವನ ಹಣವನ್ನೆಲ್ಲ ಗೆದ್ದು ಕೊಂಡವನನ್ನು ಮೂರನೇ ಜೂಜುಗಾರನು ಸುಮ್ಮನೆ ಹೋಗಲು ಬಿಡದೆ, ಒಳ್ಳೆಯ ಮಾತು ಗಳಿಂದ ಉಬ್ಬಿಸಿ ಸಾರಾಯಿ ಅಂಗಡಿಗೆ ಕರೆದೊಯ್ದನು. ಅಲ್ಲಿ ಮೈಮರೆಯುವ ಹಾಗೆ ಅವನಿಗೆ ಕುಡಿಸಿ. ಅವನ ಹಣದ ಚೀಲವನ್ನು ತಾನು ಎತ್ತಿಕೊಂಡು ಹೊರಟನು.

ಹೀಗೆ ಹೊರಟ ಆ ಮೂರನೆಯವನಿಗೆ ಗಸ್ತು ತಿರುಗುವ ರಕ್ಷಕ ಭಟರು, ತನ್ನ ಕಡೆಗೇ ಬರುವುದು ಕಂಡಿತು. ಹಿಂದೆ ತಿರುಗಿ ಬೇಗ ಬೇಗನೆ ನಡೆದನು. ಅದರಿಂದ ಗಸ್ತಿನ ಭಟರಿಗೆ ಅನುಮಾನವಾಗಿ ಅವನ ಬೆನ್ನು ಹಿಡಿದರು. ಮೂರನೇಯವನು ಓಡುತ್ತಾ ಸಿಕ್ಕಿಬೀಳುವ ಸಂದರ್ಭವನ್ನು ನೆನೆದು ಹೆದರಿ, ಹಣದ ಚೀಲವನ್ನು ಒಂದು ಮನೆಯ ಆವರಣದೊಳಕ್ಕೆ ಬಿಸುಟು ಓಡಿ ಹೋದನು.

ಆ ಮನೆ ಭದ್ರಕನದೇ. ಭದ್ರಕನು ಕಳ್ಳರ ಭಯ ದಿಂದ ರಾತ್ರಿಯಲ್ಲಿ ಸರಿಯಾಗಿ ನಿದ್ದೆ ಮಾಡುವುದಿಲ್ಲ. ಮನೆಯ ಬಾಗಿಲಲ್ಲಿಯೇ ಜಣಕ್ಕೆಂದು ಲಕ್ಷ್ಮೀ ದೇವಿಯ ಗೆಜ್ಜೆಯ ಸಪ್ಪಳವಾದಂತಾಗಲು, ಭದ್ರಕನು ಬಾಗಿಲು ತೆರೆದು ಬಂದು ಅಲ್ಲಿಬಿದ್ದ ಧನದ ಚೀಲ ವನ್ನು ಎತ್ತಿಕೊಂಡನು.

ಅದೇ ಸಮಯಕ್ಕೆ ಗಸ್ತಿನ ಭಟರು ಬಂದು ಚೀಲ ದೊಂದಿಗೆ ನಿಂತಿರುವ ಭದ್ರಕನನ್ನು ಹಿಡಿದರು. ತಾನು ಕಳ್ಳನಲ್ಲವೆಂದು ಭದ್ರಕನು ಹೇಳಿದರೂ ಅವರು ಕೇಳಲಿಲ್ಲ. ಮರುದಿನ ನ್ಯಾಯಾಸ್ಥಾನದಲ್ಲಿ ಆ ಹಣದ ಚೀಲವನ್ನು ಹಾಜರು ಪಡಿಸಿದರು.

ವಿಚಾರಣೆಯಲ್ಲಿ ಆ ಹಣದ ಚೀಲ ಹೇಗೆ ಕೈ ಬದಲಾಗಿ ಹೋದುದೆಂಬ ವಿವರಗಳೆಲ್ಲಾ ಹೊರ ಬಿತ್ತು. ಭದ್ರಕನ ಮೋಸವು ಎಲ್ಲರಿಗೂ ತಿಳಿಯಿತು. ವೈಶಾಖನನ್ನು ಅನುಮಾನಿಸಿದ್ದಕ್ಕಾಗಿ ಹಿರಿಯರು ಅವನ ಮುಂದೆ ಕ್ಷಮಾಪಣೆ ಕೇಳಿಕೊಂಡರು. ಭದ್ರಕನಿಗೂ ಅವನ ಮಗನಿಗೂ ಜುಲುಮಾನೆಯ ಶಿಕ್ಷೆ ವಿಧಿಸಲ್ಪಟ್ಟಿತು.



# ನಿಜವಾದ ದೊಡ್ಡತನ

ಅನೇಕ ವರ್ಷಗಳ ಹಿಂದೆ ವಿದರ್ಭದೇಶದಲ್ಲಿ ಕೋಟೀಶ್ವರನಾದ ಒಬ್ಬ ವರ್ತಕನಿದ್ದನು. ಅವನಿಗೆ ಹೆಣ್ಣು ಮಕ್ಕಳ ಹೊರತು ಗಂಡು ಮಕ್ಕಳಿಲ್ಲ. ಅವನ ಹೆಂಡತಿ ಒಂದು ಸಾರಿ ಅವನೊಂದಿಗೆ, "ಇಷ್ಟು ಹಣ ನಮ್ಮ ಹತ್ತಿರ ನರಳಿಕೊಂಡಿದೆ. ಒಂದು ಸಾರಿ ಊರವರಿಗೆಲ್ಲಾ ಔತಣದ ಊಟ ಹಾಕಬಹುದಲ್ಲಾ? ಹಾಗೆ ಮಾಡಿದರೆ ಒಬ್ಬ ಮಗ ಹುಟ್ಟಲೂಬಹುದು" ಎಂದಳು.

ವರ್ತಕನು ಹಾಗೆಯೇ ಔತಣದ ಏರ್ಪಾಡು ಮಾಡಿ, ಊರೊಳಗಿನ ಎಲ್ಲರಿಗೂ ಆಹ್ವಾನ ಕಳುಹಿಸಿದನು. ದೊಡ್ಡ ರೀತಿಯಲ್ಲಿ ಜರುಗಿದ ಆ ಔತಣಕ್ಕೆ ಊರೊಳಗಿನ ಎಲ್ಲರೂ ಬಂದರು. ಆದರೆ ಒಬ್ಬನೇ ಒಬ್ಬ ಕಟ್ಟಿಗೆ ರಾಮನು ಮಾತ್ರ ಬರಲಿಲ್ಲ.

ಆ ಮೇಲೆ ಒಂದು ದಿನ ರಾಮಣ್ಣನು ವರ್ತಕನ ಕಣ್ಣಿಗೆ ಬಿದ್ದಾಗ, "ಔತಣಕ್ಕೆ ಏಕೆ ಬರಲಿಲ್ಲವೋ ರಾಮಾ?" ಎಂದು ಕೇಳಿದ.

"ಅಯ್ಯಾ, ನೀವು ಊರವರಿಗೆಲ್ಲ ಔತಣ ಹಾಕಿದ ದಿನ ನನ್ನ ಕಟ್ಟಿಗೆ ಕೊಂಡುಕೊಳ್ಳುವವರಿಲ್ಲದೆ, ಮನೆಯಲ್ಲಿ ಎಲ್ಲರೂ ಉಪವಾಸವಿದ್ದೆವು" ಎಂದನು ರಾಮ.

"ನೀವೆಲ್ಲಾ ಬಂದು ಔತಣದ ಊಟ ಮಾಡುವುದನ್ನು ಬಿಟ್ಟು ಉಪವಾಸವಿದ್ದಿರೇಕೆ?" ಎಂದು ವರ್ತಕನು ಆಶ್ಚರ್ಯದಿಂದ ಕೇಳಿದನು.

"ಒಂದು ಹೊತ್ತು ನಿಮ್ಮಲ್ಲಿ ಊಟ ಮಾಡಿದರೆ ಒದಕಿರುವ ಕಾಲವೆಲ್ಲಾ ನಿಮಗೆ ತಲೆ ಬಗ್ಗಿಸಬೇಕು! ನನ್ನ ತೋಳುಗಳ ಕಷ್ಟದ ಮೇಲೆ ಬದುಕುವಂಥ ನಾನು ಹಾಗೆ ಮಾಡುವ ಅಗತ್ಯವೇನಿದೆ?" ಎಂದನು ರಾಮ.

ಆ ಮೇಲೆ ವರ್ತಕನನ್ನು ಕುರಿತು ಹತ್ತು ಮಂದಿ, ಅವನಷ್ಟು ದೊಡ್ಡವನು ಯಾರೂ ಇಲ್ಲವೆಂದು ಹೊಗಳಿದಾಗ, "ನನಗಿಂತ ದೊಡ್ಡವನು ಕಟ್ಟಿಗೆ ರಾಮನೇ ಸರಿ!" ಎಂದು ವರ್ತಕನು ಅವನು ಹೇಳಿದ ಮಾತುಗಳನ್ನು ಎಲ್ಲರಿಗೂ ಹೇಳುತ್ತಿದ್ದನು.





# ಶ್ರಮ ಫಲಿತ

ಒಂದಾನೊಂದು ದೇಶದಲ್ಲಿ ಒಬ್ಬ ಬಡ ಬ್ರಾಹ್ಮಣನಿದ್ದನು. ಅವನಿಗೊಂದು ಚಿಕ್ಕಮನೆಯೂ, ಅದಕ್ಕೆ ತಕ್ಕ ಚಿಕ್ಕ ವಠಾರವೂ ಮಾತ್ರ ಇದ್ದಿತು. ಆ ಬ್ರಾಹ್ಮಣನು ಪ್ರತಿದಿನ ಬೆಳಿಗ್ಗೆ ಎದ್ದು ಹೊರಗೆ ಹೋಗಿ ಭಿಕ್ಷಾಟನೆ ಮಾಡುತ್ತಿದ್ದನು. ತನಗೂ ತನ್ನ ಹೆಂಡತಿಗೂ ಸರಿಹೋಗುವಷ್ಟು ಅಕ್ಕಿ ಸಿಕ್ಕಿದ ಕೂಡಲೇ ತೃಪ್ತಿಹೊಂದಿ ಮನೆಗೆ ಹಿಂದಿರುಗಿ ಬಂದು ಆ ಭಿಕ್ಷೆಯನ್ನು ಹೆಂಡತಿಗೆ ಕೊಡುತ್ತಿದ್ದನು. ಅವಳು ಆ ಅಕ್ಕಿಯಿಂದ ಅನ್ನಮಾಡುವಳು. ವಠಾರದೊಳಗೆ ಬೆಳೆದ ಒಂದಿಷ್ಟು ತರಕಾರಿಗಳಿಂದ ಏನೋ ಮೇಲೋಗರ ಮಾಡುವಳು. ಹೀಗೆಯೇ ನಡೆಯುತ್ತಿತ್ತು ಅವರ ದಿನಗಳು.

ಕಾಲವು ಒಂದೇ ಬಗೆಯಾಗಿರುವುದಿಲ್ಲವಷ್ಟೆ? ಪ್ರಾಯ ಮೀರಿದುದರಿಂದ ಬ್ರಾಹ್ಮಣನಿಗೆ ಭಿಕ್ಷೆಗೆ ತಿರುಗಾಡಲು ಕಷ್ಟವಾಯಿತು. ಗಂಡನು ಶ್ರಮಪಡುವುದನ್ನು ಸಹಿಸಲಾಗದೆ ಅವನ ಹೆಂಡತಿ, "ನೀವು ಈವರೆಗೂ ನಾಳೆಯನ್ನು ಕುರಿತು ಆಲೋಚಿಸುವ ಗೊಡವೆಗೇ ಹೋಗಲಿಲ್ಲ. ಮೊದಲೇ ಜಾಗರೂಕತೆ ಮಾಡಿದ್ದರೆ ಈಗ ನಮಗೆ ತೊಂದರೆ ಇಲ್ಲದೆ ಇರುತ್ತಿತ್ತು. ಆದರೂ ಈ ದೇಶದ ಮಹಾರಾಜನು ದೊಡ್ಡ ದಾನಶೀಲನೆಂದು ಕೇಳಿದ್ದೇವೆ. ನೀವು ಹೋಗಿ ಕೇಳಿದರೆ ಅವನು ನಮ್ಮ ದಾರಿದ್ರ್ಯವನ್ನು ತೀರಿಸದೆ ಇರಲಾರ. ಒಂದುಸಾರಿ ಹೋಗಿಬನ್ನಿ" ಎಂದಳು.

ಬ್ರಾಹ್ಮಣನು ಆ ಪ್ರಕಾರವೇ ರಾಜನನ್ನು ನೋಡಲು ಹೋಗಿ, ರಾಜನ ಮುಂದೆ ನಿಂತು ಆಶೀರ್ವಚನ ಮಂತ್ರಗಳನ್ನು ಉಚ್ಚರಿಸಿದನು. ರಾಜನು, "ನಿಮಗೇನು ಬೇಕು ? ಕೇಳಿರಿ" ಎಂದನು.

"ಅಯ್ಯಾ, ತಾವು ದೊಡ್ಡ ಸಂಪನ್ನರೆಂಬುದು ನಿಜ. ಆ ಸಂಪತ್ತಿನ ಅಂಶದಲ್ಲಿ ನನಗೇನೂ ಬೇಡ. ನಾನು ತುಂಬಾ ಬಡವನಾಗಿರುವವನು. ತಾವು ಶ್ರಮಪಟ್ಟು ಸಂಪಾದಿಸಿದ್ದು ತೃಣವೋ ಪಣವೋ ಏನಾದರೂ ಇದ್ದರೆ ದಾನಮಾಡಿದರೆ ಸಾಕು" ಎಂದನು ಬ್ರಾಹ್ಮಣ.

ರಾಜನು ಯೋಚನೆಗೆ ಬಿದ್ದನು. ಅವನ ಹತ್ತಿರ ಬೆಟ್ಟದಷ್ಟು ಧನವಿರುವುದೇನೋ ನಿಜ. ಆದರಲ್ಲಿಯ ಒಂದು ಚಿಕ್ಕಾಸು ಕೂಡಾ ಅವನು ಕಷ್ಟಪಟ್ಟು ಸಂಪಾದಿಸಿದ್ದು ಮಾತ್ರ ಅಲ್ಲ. ಈ ಬ್ರಾಹ್ಮಣನಿಗೆ

ಏನಾದರೂ ಕೊಡಬೇಕೆಂದರೆ ತಾನು ಹೊಸದಾಗಿ ಸಂಪಾದಿಸಬೇಕಾದ್ದೇ ಎಂದು ನೆನೆದು ರಾಜನು ಬ್ರಾಹ್ಮಣನೊಂದಿಗೆ, "ನಾಳೆ ಸಾಯಂಕಾಲ ಬನ್ನಿರಿ" ಎಂದನು.

ಸರಿ ಎಂದು ಬ್ರಾಹ್ಮಣನು ಹೊರಟುಹೋದನು. ಮರುದಿನ ಬೆಳಿಗ್ಗೆ ರಾಜನು ಮಾಸಿದ ತುಂಡುಬಟ್ಟೆ ಕಟ್ಟಿಕೊಂಡು ಬಡಕೂಲಿಯುವನ ವೇಷದಲ್ಲಿ ಹೊರಟನು. ಸ್ವಲ್ಪ ದೂರದಲ್ಲಿ ಕುಂಬಾರಕೇರಿಯೊಂದು ಹತ್ತಿತು. ಅಲ್ಲಿಯ ಒಬ್ಬ ಕುಂಬಾರನ ಬಳಿಗೆ ಹೋಗಿ, "ಅಯ್ಯಾ, ನನಗೆ ಏನಾದರೂ ಒಂದು ಕೆಲಸ ಕೊಡಬಲ್ಲಿರಾ ?" ಎಂದು ರಾಜನು ಕೇಳಿದನು.

"ಕೆಲಸಕ್ಕೇನು ಮಹಾ ! ತುಂಬಾ ಇದೆ. ನನಗೆ ಕುಲಾಲ ಚಕ್ರ ತಿರುಗಿಸುವುದರಲ್ಲೇ ಸರಿಹೋಗುತ್ತದೆ. ನೀನು ಆ ಮಣ್ಣಿನ ರಾಶಿಯನ್ನು ಕಲಸು. ಸಾಯಂಕಾಲದ ವರೆಗೆ ಚೆನ್ನಾಗಿ ಮೆದ್ದು ಕಲಸಿದರೆ ನಾಲ್ಕು ರೂಪಾಯಿ ಕೊಡುತ್ತೇನೆ" ಎಂದನು ಕುಂಬಾರ.

ರಾಜನು ಸರಿಯೆಂದು ಮಣ್ಣಿಗೆ ನೀರು ಬೆರೆಸಿ ಕಲಸಕ್ಕೆ ತೊಡಗಿದನು. ಆವೆ ಮಣ್ಣಿನ ಮುದ್ದೆಯನ್ನು ಕಾಲಿನಿಂದ ಮೆದ್ದು ಮೆದ್ದು ಕಲಸಿ ಕಲಸಿ ಕಾಲಿಗೆ ತುಂಬಾ ನೋವಾಗಿಹೋಯಿತು. ಸ್ವಲ್ಪ ಸುಮ್ಮನಿದ್ದು ಸಮಾಳಿಸಿಕೊಳ್ಳುತ್ತಾ ಕೆಲಸ ಮಾಡಿಯೇ ಮಾಡಿದನು. ಅವನ ನೋವನ್ನು ಗಮನಿಸಿದ ಕುಂಬಾರ, "ನಿನ್ನಿಂದ ಇಂಥಾ ಕೆಲಸ ಏನಾದೀತು ? ಸಾಕುಬಿಡು. ಅಭ್ಯಾಸವಿಲ್ಲದವ ಅಂತ ಕಾಣುತ್ತೆ. ಹೇಳಿಬಿಟ್ಟೆನಾದ್ದರಿಂದ ಕೊಡುತ್ತೇನೆ. ಇಕೋ ನಾಲ್ಕು ರೂಪಾಯಿ. ಇನ್ನೆಂದಿಗೂ ಇಂಥಾ ಕೆಲಸ ಮಾಡಲು ಬರಬೇಡಪ್ಪ" ಎಂದು ಚುಚ್ಚುವಂತೆ ಹೇಳಿ ರಾಜನನ್ನು ಕಳುಹಿಸಿದನು.

ಮರುದಿನ ಹೇಳಿದ ಪ್ರಕಾರವೇ ಬ್ರಾಹ್ಮಣನು ರಾಜನ ಬಳಿಗೆ ಬಂದನು. ರಾಜನು ಅವನ ಕೈಗೆ



ನಾಲ್ಕು ರೂಪಾಯಿಗಳನ್ನು ಇಟ್ಟು, "ಇದೇ ನನ್ನ ಶ್ರಮ ಫಲಿತ !" ಎಂದನು.

"ಇದೇ ನನಗೆ ಹದಿನಾಲ್ಕು ಸಾವಿರ ಮಹಾರಾಜರೇ !" ಎಂದು ಬ್ರಾಹ್ಮಣನು ಹೃದಯಪೂರ್ವಕವಾಗಿ ರಾಜನನ್ನು ಆಶೀರ್ವದಿಸಿ ಹೊರಟುಹೋದನು.

ತನ್ನ ಗಂಡ ರಾಜನ ಬಳಿಯಿಂದ ಪಡೆದ ಬಹುಮಾನಗಳನ್ನು ಎಷ್ಟು ಗಾಡಿಗಳಲ್ಲಿ ತರುವರೋ ಎಂದು ಹೆಂಡತಿ ಇದಿರು ನೋಡುವಾಗ, ಗಂಡನು ಬರಿಗೈಯಿಂದ ಬರುವುದನ್ನು ನೋಡಿ, "ಇದೇನ್ರೀ ? ಏನಾಯಿತು ? ಮತ್ತೆ ನಾಳೆ ಬರಬೇಕಂತೇನು ?" ಎಂದು ಕೇಳಿದಳು.

"ಇಲ್ಲಯಿಲ್ಲ, ರಾಜನಿಂದ ದಾನ ತೆಗೆದುಕೊಂಡೇ ಬಂದೆ. ಇಕೋ ನಾಲ್ಕು ರೂಪಾಯಿಗಳು !" ಎಂದು ಬ್ರಾಹ್ಮಣನು ಆ ರೂಪಾಯಿಗಳನ್ನು ಹೆಂಡತಿಯ ಕೈಗೆ ಹಾಕಿದನು.

ಅವುಗಳನ್ನು ನೋಡಿ ಬ್ರಾಹ್ಮಣನ ಹೆಂಡತಿ ಕೋಪದಿಂದ ಉರಿಯುತ್ತ, "ಕಾಶೀಗೆ ಹೋಗಿ ಕೊಕ್ಕರೆ ಗರೀ ತಂದ ಹಾಗೆ, ರಾಜನ ಹತ್ತಿರ ಕೂಡಾ ಈ ಭಿಕ್ಷೆಯ ಕಾಸೇನಾ ? " ಎಂದು ಅವಳು ಆ ನಾಲ್ಕು ರೂಪಾಯಿಗಳನ್ನೂ ಹೊರಗೆ ಬಿಸುಟಳು.

ಆಗ ಕತ್ತಲಾಗಿ ಹೋದುದರಿಂದ, ಬೆಳಗಾದ ಮೇಲೆ ಅವುಗಳನ್ನು ಹುಡುಕಿದರಾಯಿತು ಎಂದು ಕೊಂಡನು ಬ್ರಾಹ್ಮಣ. ಆದರೆ ಮರುದಿನ ಎಷ್ಟು ಹುಡುಕಿದರೂ ಆ ರೂಪಾಯಿಗಳು ದೊರಕಲಿಲ್ಲ. ಆದರೆ ಹೊಸತಾಗಿ ಮೊಳೆತ ನಾಲ್ಕು ಅಪೂರ್ವ ಗಿಡಗಳು ಕಂಡು ಬಂದುವು.

ನೋಡುತ್ತಿದ್ದ ಹಾಗೆಯೇ ಆ ಅಪೂರ್ವ ಗಿಡಗಳು ಸುಂದರವಾಗಿ ಬೆಳೆದುವು. ಬೇಗದಲ್ಲಿ ಕಾಯಿಗಳಾಗಿ ಕಂಗೊಳಿಸಿದುವು. ಬ್ರಾಹ್ಮಣನೂ ಅವನ ಹೆಂಡತಿಯೂ ಅವುಗಳ ರುಚಿ ಹೇಗಿದೆಯೋ ನೋಡೋಣವೆಂದು ಕೊಯ್ದು ಹೆಚ್ಚಿದರು. ಅವುಗಳ ತುಂಬಾ ಮುತ್ತುಗಳಿದ್ದುವು. ಆ ಬಡ ದಂಪತಿಗಳು ತಮ್ಮ ಕಣ್ಣುಗಳನ್ನು ನಂಬದೆ, ಆ ಮುತ್ತುಗಳನ್ನು ವರ್ತಕರಿಗೆ ತೋರಿಸಿದರು. ಅವು ಉತ್ತಮ ಜಾತಿಯ ಮುತ್ತುಗಳೆಂದು ತಿಳಿಯಿತು. ಆದರಿಂದ ಇಷ್ಟು ಕಾಲ ದಾರಿದ್ರ್ಯವನ್ನು ಅನುಭವಿಸಿದ ಆ ಬಡವರ ಕಷ್ಟ ತೀರಿತು. ನಾಲ್ಕು ಮರಗಳೂ ಕಲ್ಪವೃಕ್ಷಗಳಂತೆ ಹಣ್ಣುಗಳನ್ನು ಕೊಡುತ್ತಿರಲು, ಬ್ರಾಹ್ಮಣನು ಆ ಮುತ್ತಿನ ಹಣ್ಣುಗಳನ್ನು ಊರವರಿಗೆ ದಾನ ಮಾಡಲೂ ತೊಡಗಿದನು.

ಈ ಅದ್ಭುತ ಸಮಾಚಾರ ರಾಜನಿಗೂ ಗೊತ್ತಾಯಿತು. ಶ್ರಮದಾನವನ್ನು ಬೇಡಿ, ನಾಲ್ಕು ರೂಪಾಯಿಗಳನ್ನು ತೆಗೆದುಕೊಂಡು ಹೋದ ಬ್ರಾಹ್ಮಣನು, ಅಷ್ಟು ಬೇಗ ಹೇಗೆ ಸಿರಿವಂತನಾದನೋ ಎಂದು ರಾಜನಿಗೆ ಗೊತ್ತಾಗಲಿಲ್ಲ. ಅದನ್ನು ತಿಳಿಯಲು ರಾಜನು ಸ್ವತಃ ಹೊರಟು ಬ್ರಾಹ್ಮಣನ ಮನೆಗೇ ಬಂದನು.

"ಅಯ್ಯಾ, ಆ ದಿನ ನೀವು ಕೊಟ್ಟ ನಾಲ್ಕು ರೂಪಾಯಿಗಳನ್ನು ನನ್ನವಳು ಖರ್ಚು ಮಾಡದೆ ಹೊರಗೆ ಬಿಸಾಡಿದಳು. ಅವು ದೊರಕದೇ ಹೋಗಿ, ಈ ನಾಲ್ಕು ಮುತ್ತಿನ ಹಣ್ಣು ಬಿಡುವ ಮರಗಳು ಬೆಳೆದಿವೆ. ಇವುಗಳಿಂದಲೇ ನಮ್ಮ ತಲೆತಲಾಂತರಗಳ ದಾರಿದ್ರ್ಯವು ತೀರಿತು" ಎಂದ ಬ್ರಾಹ್ಮಣ.

ಶ್ರಮ ಫಲಿತದ ಬೆಲೆ ರಾಜನಿಗೆ ಅರ್ಥವಾಯಿತು. ಆ ದಿನದಿಂದ ತಾನೇ ಅಲ್ಲದೆ ಪ್ರಜೆಗಳೂ ಶ್ರಮ ಫಲಿತವನ್ನು ಅನುಭವಿಸುವಂತಹ ಶಾಸನಗಳನ್ನು ಮಾಡಿದನು ಆ ರಾಜ.





# ಪಂಚಾಯುಧ

ಬ್ರಹ್ಮದತ್ತನು ಕಾಶೀರಾಜ್ಯವನ್ನು ಪರಿಪಾಲನೆ ಮಾಡುತ್ತಿದ್ದ ಕಾಲದಲ್ಲಿ, ಬೋಧಿಸತ್ವನು ಯುವ ರಾಜನಾಗಿ ಜನ್ಮವೆತ್ತಿದನು. ರಾಜಪುತ್ರನ ಜನನ ವಾದುದರಿಂದ ರಾಜ್ಯದಲ್ಲೆಲ್ಲಾ ಸಂತೋಷ ಸಮಾರಂಭ ಗಳು ನಡೆದುವು.

ನಾಮಕರಣ ಮಹೋತ್ಸವಕ್ಕೆ ದೊಡ್ಡದೊಡ್ಡ ಜ್ಯೋತಿಷ್ಕರೂ, ದೈವಜ್ಞರೂ ಬಂದರು. ಅವರು ರಾಜಕುಮಾರನ ಜಾತಕವನ್ನು ನೋಡಿ, ರಾಜ ನೊಂದಿಗೆ "ಮಹಾರಾಜಾ, ಈ ಮಗುವಿನ ಜಾತಕ ಬಹಳ ದೊಡ್ಡದು. ಇವನಿಂದ ನಿಮ್ಮ ವಂಶಕ್ಕೆ ದೊಡ್ಡ ಕೀರ್ತಿ ಬರುತ್ತದೆ. ಇವನು ಐದು ಆಯುಧ ಗಳನ್ನು ಪ್ರಯೋಗಿಸಬಲ್ಲವನಾಗಿ ಪ್ರಪಂಚವನ್ನೇ ಜಯಿಸುವಂತಹ ಪರಾಕ್ರಮಶಾಲಿಯಾಗುತ್ತಾನೆ. ಅದಕ್ಕೆ ತಕ್ಕಂತಹ ಹೆಸರನ್ನೇ ಇವನಿಗೆ ಇಡಬೇಕು" ಎಂದರು. ಅವರ ಅಭಿಪ್ರಾಯದಂತೆ ರಾಜಕುಮಾರನಿಗೆ "ಪಂಚಾಯುಧ" ಎಂದು ಹೆಸರಿಟ್ಟರು.

ಕಾಲಕ್ರಮದಲ್ಲಿ ಹುಡುಗನಿಗೆ ಬುದ್ಧಿ ಬೆಳೆಯುವ ವಯಸ್ಸು ಬರಲು, ಅವನನ್ನು ಗಾಂಧರ್ವ ದೇಶದ ಲ್ಲಿರುವ ದೊಡ್ಡ ವಿದ್ಯಾಕೇಂದ್ರವನ್ನು ನಡೆಸುವ, ತಕ್ಷಶಿಲಾ ನಗರದ ಮಹಾ ಪಂಡಿತರಾದ ಗುರುವಿನ ಬಳಿಗೆ ವಿದ್ಯಾಭ್ಯಾಸಕ್ಕೆ ಕಳುಹಿಸಿದರು.

ಪಂಚಾಯುಧನು ತಕ್ಷಶಿಲಾ ಗುರುಕುಲದಲ್ಲಿ ಸ್ವಲ್ಪಕಾಲದೊಳಗೇ ಸಕಲ ವಿದ್ಯೆಗಳಲ್ಲಿಯೂ ಪಾರಂಗತನಾಗಿಬಿಟ್ಟನು. ಅವನ ಮೇಧಾಶಕ್ತಿಗೆ ಮೆಚ್ಚಿದ ಗುರುಗಳು ಸಂತೋಷದಿಂದ ಶಿಷ್ಯನನ್ನು ಹರಸಿ, ಅವನಿಗೆ ಐದು ಬಗೆಯ ಆಯುಧಗಳನ್ನು ಪ್ರಸಾದಿಸಿದರು. ಅವುಗಳನ್ನು ಭಕ್ತಿಯಿಂದ ಸ್ವೀಕರಿಸಿ ಕೊಂಡು ಪಂಚಾಯುಧನು ಗುರುವಿನ ಅನುಜ್ಞೆ ಪಡೆದು ಕಾಶೀರಾಜ್ಯಕ್ಕೆ ಹಿಂದಿರುಗಿದನು.

ದಾರಿಯಲ್ಲಿ ಪಂಚಾಯುಧನು ದೊಡ್ಡದೊಂದು ಕಾಡಿನೊಳಗೆ ಪ್ರವೇಶಿಸಬೇಕಿತ್ತು. ಅದುವೇ ಸಮೀಪದ ದಾರಿ. ಅವನು ಆ ಕಾಡು ದಾರಿಯಲ್ಲಿ ಕೆಲವಾರು ಅಡಿಗಳಷ್ಟು ಹೋಗುತ್ತಿರಲು, ಕೆಲವು ಮನುಷ್ಯರು ಅವನನ್ನು ಕರೆದು, "ಇನ್ನೂ ಚಿಕ್ಕವ ನಾಗಿರುವಿ. ಈ ಕಾಡಿನ ಸಮಾಚಾರ ತಿಳಿಯದೆಂದು ಕಾಣುತ್ತೆ. ಈ ಅರಣ್ಯದೊಳಗೆ ರೋಮಾಂಚನೆಂಬ ರಕ್ಕಸನೊಬ್ಬನು ವಿಹರಿಸಿಕೊಂಡಿದ್ದಾನೆ. ಅವನ ಕಣ್ಣಿಗೆಬಿದ್ದರೆ ನಿನ್ನ ಪ್ರಾಣ ಉಳಿಯಲಾರದು.

ಈ ದಾರಿಯಲ್ಲಿ ಹೋದವರಾರೂ ಮತ್ತೆ ಕಾಣಲಿಲ್ಲ. ಆದ್ದರಿಂದ ಈ ದಾರಿಬಿಟ್ಟು, ಸ್ವಲ್ಪ ದೂರವಾದರೂ ಚಿಂತಿಲ್ಲ, ಸುತ್ತು ದಾರಿಯಿಂದ ಹೋಗುವುದೇ ಕ್ಷೇಮ " ಎಂದು ಸಲಹೆ ಮಾಡಿದರು.

ಅವರ ಮಾತನ್ನು ಪರಾಕ್ರಮಶಾಲಿಯಾದ ಪಂಚಾಯುಧನು ಲಕ್ಷ್ಯಮಾಡಲಿಲ್ಲ. " ಹಾಗಾದರೆ ನಾನು ಅಗತ್ಯವಾಗಿ ಆ ರಕ್ಕಸನನ್ನು ನೋಡಲೇಬೇಕು. ಎಲ್ಲರನ್ನು ಏಕೆ ಹೆದರಿಸುವನೋ ಎಂಬುದನ್ನು ತಿಳಿದು ತಕ್ಕ ಪರಿಹಾರ ಮಾಡದಿದ್ದರೆ, ನಾನು ಕಲಿತ ವಿದ್ಯೆಗಳಿಗೆ ಏನು ಸಾರ್ಥಕವಿದೆ ?" ಎಂದುಕೊಂಡು ಅವನು ಆ ಅರಣ್ಯ ಮಾರ್ಗದಲ್ಲೇ ನಡೆಯತೊಡಗಿದನು. ಹಾಗೆ ನಡೆಯುತ್ತಿರಲು, ಒಂದು ಕಡೆಯಲ್ಲಿ ತಾಳೇ ಮರದಷ್ಟು ಎತ್ತರವಾದ ರೋಮಾಂಚ ರಾಕ್ಷಸನು ಅವನ ಇದಿರಿನಲ್ಲಿ ಅಡ್ಡಗಟ್ಟಿ ನಿಂತನು.

ನಿಜಕ್ಕೂ ರೋಮಾಂಚ ರಾಕ್ಷಸನು ಭಯಂಕರನಾಗಿಯೇ ಇದ್ದನು. ದೊಡ್ಡ ತಲೆ, ಕಿಡಿಯುದುರುವ ಕಣ್ಣುಗಳು, ಆನೆಗೆ ಇರುವ ಹಾಗೆ ಬಾಯಿಯಲ್ಲಿ ಉದ್ದವಾದ ಎರಡು ದಂತಗಳು. ಶರೀರದ ತುಂಬಾ ಕರಡಿಯ ಹಾಗಿನ ರೋಮಗಳು ! ಆದರಿಂದಲೇ ಅವನಿಗೆ ರೋಮಾಂಚನೆಂದು ಹೆಸರು ಬಂದಿತ್ತು. ನಿಜಕ್ಕೂ ಮಹಾ ಭಯಂಕರ ರೂಪದವನೇ !

ರಾಕ್ಷಸನು ಪಂಚಾಯುಧನ ದಾರಿಗೆ ಅಡ್ಡವಾಗಿ ನಿಂತು. " ಯಾರೋ ನೀನು ? ಎಲ್ಲಿಗೆ ಹೊರಟಿದ್ದೀ ? ನಿನ್ನ ಆಯುಷ್ಯ ಮುಗಿದೇ ಬರುತ್ತಿರುವಿ. ಹಸಿವೆಯ ಹೊತ್ತಿಗೆ ಸರಿಯಾಗಿ ಬಂದೆ. ಇನ್ನು ಸೀದಾ ನನ್ನ ಬಾಯಿಗೇ ಬರಬೇಕು. ನಿನ್ನನ್ನು ನುಂಗುತ್ತೇನೆ ! ಹುಂ " ಎಂದು ಹೂಂಕರಿಸಿದನು.

ಪಂಚಾಯುಧನು ಸ್ವಲ್ಪವೂ ಹೆದರದೆ, " ರಾಕ್ಷಸ ರಾಜಾ, ನಿನ್ನ ವಿಷಯ ತಿಳಿದುದರಿಂದಲೇ ಹೀಗೆ ಬಂದಿದ್ದೇನೆ. ಎಚ್ಚರ ! ದುಡುಕಿ ನನ್ನನ್ನು ಮುಟ್ಟಬೇಡ !" ಎಂದು ಬಿಲ್ಲಿಗೆ ಬಾಣ ಹೂಡಿ ರಾಕ್ಷಸನ ಮೇಲೆ ಬಲವಾಗಿ ಪ್ರಯೋಗಿಸಿದನು.

ಬಾಣವು ರಿವ್ವನೆ ಹೋಗಿ ರಾಕ್ಷಸನ ಶರೀರದ ರೋಮಗಳಲ್ಲಿ ಸಿಕ್ಕಿಕೊಂಡಿತು. ಆದರೆ ಅವನಿಗೆ



ಯಾವ ಗಾಯವೂ ಆಗಲಿಲ್ಲ. ಈಸಾರಿ ಪಂಚಾಯುಧನು ಬಾಣಗಳ ಮೇಲೆ ಬಾಣಗಳನ್ನು ಪ್ರಯೋಗಿಸಿದನು. ಏನೂ ಪ್ರಯೋಜನವಾಗಲಿಲ್ಲ. ಕೊನೆಯ ಪ್ರಯತ್ನವಾಗಿ ವಿಷಲೇಪಿತವಾದ ಬಾಣಗಳನ್ನೂ ಬಿಟ್ಟನು. ಅವಾವುವೂ ರಾಕ್ಷಸನಿಗೆ ಸ್ವಲ್ಪ ಕೂಡಾ ನೋವುಂಟುಮಾಡಲಿಲ್ಲ. ಪ್ರತಿ ಬಾಣಗಳಿಗೂ ರಾಕ್ಷಸನು ಗೇಲಿಮಾಡಿ ನಕ್ಕನು !

ರಾಕ್ಷಸನು ದೊಡ್ಡದೊಂದು ಹೂಂಕಾರಮಾಡಿ ಪಂಚಾಯುಧನನ್ನು ಹಿಡಿಯಲು ಬಂದನು. ಪಂಚಾಯುಧನು ತನ್ನ ಖಡ್ಗವನ್ನು ಹಿರಿದು ರಾಕ್ಷಸನ ಮೇಲೆ ಬೀಸಿದನು. ರಾಕ್ಷಸನು ಸ್ವಲ್ಪವೂ ಚಲಿಸಲಿಲ್ಲ.

ಅದನ್ನು ನೋಡಿ ಪಂಚಾಯುಧನು ರಾಕ್ಷಸನೊಂದಿಗೆ, "ಎಲೋ, ನನ್ನ ಸಾಮರ್ಥ್ಯ ಇಷ್ಟೇ ಎಂದು ತಿಳಿದು ದುಡುಕಬೇಡ. ನಿನಗೆ ನಾನು ಯಾರೆಂದು ಇನ್ನೂ ಗೊತ್ತಾಗಲಿಲ್ಲ. ನನ್ನ ಹೆಸರು ಪಂಚಾಯುಧನೆಂದು. ನಾನು ಈ ಅರಣ್ಯವನ್ನು ಪ್ರವೇಶಿಸುವಾಗ ಕೇವಲ ಹೊರಗಿನ ಆಯುಧಗಳನ್ನು ನಂಬಿಕೊಂಡು ಪ್ರವೇಶಿಸಿದ್ದಲ್ಲ. ನನ್ನ ಪಂಚಾಯುಧಗಳು ಬೇರೆಯೇ ಇವೆ !" ಎಂದು ಹೇಳಿ ತನ್ನ ಮುಷ್ಟಿಯನ್ನು ಬಿಗಿದು ರೋಮಾಂಚನನ್ನು ಬಲವಾಗಿ ಗುದ್ದಿದನು. ಆಗಲೂ ರೋಮಾಂಚನಿಗೆ ಏನೂ ಆಗಲಿಲ್ಲ.

ರಾಕ್ಷಸನು ದೊಡ್ಡ ದನಿಯಿಂದ ನಗುತ್ತ, "ಲೋ, ಹುಡುಗಾ ! ನಿನ್ನ ರೀತಿ ನೋಡುತ್ತಾ ಇದ್ದರೆ ನೀನು ಸಾಧಾರಣ ಮನುಷ್ಯನ ಹಾಗೆ ಕಾಣುವುದಿಲ್ಲ. ಪ್ರಳಯ ಭಯಂಕರನಾದ ನನ್ನನ್ನೇ ಢೀಕೊಡುವೆಯಲ್ಲಾ ! ಮಾನವರು ನನ್ನ ರೂಪ ನೋಡಿದ ಮಾತ್ರಕ್ಕೇ ಹೆದರಿ ಪ್ರಾಣ ಬಿಡುತ್ತಾರೆ. ಮನುಷ್ಯನಾದ ನಿನಗೆ ಈ ಪ್ರಾಣಭೀತಿಯಿಲ್ಲದಿರಲು ಕಾರಣವೇನು ? ನನ್ನನ್ನೇ ಆಶ್ಚರ್ಯಪಡಿಸುವಂತಹ ಇಷ್ಟು ಸಾಹಸ ಹೇಗೆ ಬಂತು ನಿನಗೆ ? " ಎಂದು ಕೇಳಿದನು. "ಭಯವೇಕೆ ? ಹುಟ್ಟಿದ ಕೂಡಲೇ ನೆರಳಿನ ಹಾಗೆ ಸಾವೂ ಬೆಂಬತ್ತಿಕೊಂಡಿರುತ್ತದೆ. ಈ



ತಿಳುವಳಿಕೆ ಮಾತ್ರವೇ ಅಲ್ಲ, ನನ್ನ ಶರೀರದಲ್ಲಿ ವಜ್ರಸಮಾನವಾದ ಖಡ್ಗವೊಂದಿದೆ. ಅದೇ ಜ್ಞಾನ! ನಿನ್ನ ಒಳಿತಿಗಾಗಿಯೇ ನಿನ್ನ ಬಾಯಿಗೆ ನುಗ್ಗಬಾರದೆಂದು ನಿಶ್ಚಯಿಸಿದ್ದೇನೆ. ನನ್ನನ್ನು ನೀನು ನುಂಗಿಬಿಟ್ಟರೆ ಆ ಜ್ಞಾನ ಖಡ್ಗವು ನಿನ್ನನ್ನು ಸೀಳಿಹಾಕುತ್ತದೆ!" ಎಂದನು ಪಂಚಾಯುಧ.

ರಾಕ್ಷಸನು ಒಂದೆರಡು ಕ್ಷಣ ಆಲೋಚಿಸಿ, "ಹುಡುಗಾ, ನೀನು ಹೇಳುವ ಮಾತಿನಲ್ಲಿ ಏನೋ ಸತ್ಯವಿರುವ ಹಾಗೆ ನನಗೆ ಅನುಮಾನವಾಗುತ್ತದೆ. ಅದು ಹೇಗಿದ್ದರೂ ನೀನು ನಿರ್ಭಯದವನೆಂಬುದು ನಿಜ. ಶೂರಶಿಖಾಮಣಿಯಾದ ನಿನ್ನನ್ನು ನುಂಗಿದರೂ ಜೀರ್ಣಿಸಿಕೊಳ್ಳಲು ಸಾಧ್ಯವಾಗದು. ಆದುದರಿಂದ ನಿನ್ನನ್ನು ತಡೆಯಲಾರೆ. ಇನ್ನು ನಿನ್ನ ಪಾಡಿಗೆ ಹೊರಟು ಹೋಗಿಬಿಡು" ಎಂದನು.

ಪಂಚಾಯುಧನಾಗಿ ಅವತರಿಸಿದ ಬೋಧಿಸತ್ವನು ರಾಕ್ಷಸನನ್ನು ಹರಸಿ, "ನನ್ನನ್ನು ಹೋಗಲು ಬಿಟ್ಟುದೇನೋ ಸರಿಯೆ. ನಿನ್ನನ್ನು ಹೀಗೆಯೇ ಬಿಡಲು ನನ್ನಿಂದಾಗದು. ನಿನ್ನ ಸಂಗತಿ ಪಾಪ! ಎಷ್ಟು ಜನ್ಮಗಳಿಂದ ಈ ದುಷ್ಟಕಾರ್ಯ ಮಾಡುತ್ತಾ ನಿಕೃಷ್ಟನಾಗಿ ಜೀವಿಸಿಕೊಂಡಿರುವಿಯೋ! ನೀನು ಅಜ್ಞಾನವೆಂಬ ಅಂಧಕಾರದಲ್ಲಿ ಸಿಕ್ಕಿಕೊಳ್ಳುತ್ತಿರುವಿ. ಆ ಪಾಪ ಬೆಳೆದಷ್ಟೂ ನಿನಗೆ ಮತ್ತೆ ಮತ್ತೆ ರಾಕ್ಷಸ ಜನ್ಮಗಳೇ ಬಂದು ಯಾತನೆ ಪಡುವುದರ ಹೊರತು ಎಂದಿಗೂ ಮೋಕ್ಷ ಸಿಕ್ಕದು. ನಿನಗೆ ಉತ್ತಮವಾದ ಮಾನವಜನ್ಮ ಬೇಕಾದರೆ ಇಂತಹ ಪಾಪ ಮಾಡಲೇ ಬಾರದು. ಆಗ ನೀನು ಖಂಡಿತಕ್ಕೂ ಕ್ಷಮಾರ್ಹನಾಗುವಿ" ಎಂದನು ಬೋಧಿಸತ್ವ.

ಅಲ್ಲಿಗೆ ಬಿಡದೆ ಬೋಧಿಸತ್ವನು ಮಾನವರಿಗೆ ಮೇಲಾಗುವಂತೆ ಅನುಸರಿಸಬೇಕಾದ ಐದು ಮಹಾಸೂತ್ರಗಳನ್ನು ಕುರಿತು, ಅದೇ ಮಾನವರನ್ನು ಅಧಮತನಕ್ಕಿಳಿಸುವ ಐದು ತಂತ್ರಗಳನ್ನು ಕುರಿತು ಕೂಡಾ ರಾಕ್ಷಸನಿಗೆ ವಿವರಿಸಿದನು.

ಆ ದಿನದಿಂದ ರೋಮಾಂಚ ರಾಕ್ಷಸನು ತನ್ನ ರಾಕ್ಷಸಕೃತ್ಯಗಳನ್ನು ಪೂರ್ತಿಯಾಗಿ ಬಿಟ್ಟನು. ಈಗ ಕಾಡಿನಲ್ಲಿ ಜನರಿಗೆ ಯಾವ ಭಯವೂ ಇಲ್ಲದಂತಾಯಿತು. ಅರಣ್ಯ ಮಾರ್ಗದಲ್ಲಿ ಪ್ರಯಾಣ ಮಾಡುವ ಅಥವಾ ಕಟ್ಟಿಗೆ ಮೊದಲಾದುವುಗಳಿಗಾಗಿ ತಿರುಗುವ ಮನುಷ್ಯರಿಗೆ ಆದರಣೆ, ಆತಿಥ್ಯ, ಸಹಾಯಗಳನ್ನು ಮಾಡುತ್ತ ಧರ್ಮಬುದ್ಧಿಯ ಸಾತ್ವಿಕ ರಾಕ್ಷಸನೆನಿಸಿ ತುಂಬಾ ಪುಣ್ಯಾತ್ಮನಾದನು. ಬೋಧಿಸತ್ವನ ಧರ್ಮಬೋಧನೆಗಳು ಕ್ರೂರರನ್ನೂ ಸಾಧುಗಳನ್ನಾಗಿ ಮಾಡುವಂತಹುದೆಂದು ಎಲ್ಲರಿಗೂ ಗೊತ್ತಾಯಿತು.





# ಖಾರವೇಲ

ಕಳಿಂಗ ರಾಜ್ಯದ ಮುಖ್ಯ ನಗರದಲ್ಲಿ ಹಿಂದಿನ ಕಾಲದ ವೀರಜಿನನ ದೊಡ್ಡ ವಿಗ್ರಹವಿದ್ದಿತು. ಅದು ಪ್ರಜೆಗಳಿಗೆ ತುಂಬಾ ಪವಿತ್ರವಾದುದು. ನಂದವಂಶದವನಾದ ಮಗಧರಾಜನು ಕಳಿಂಗ ರಾಜ್ಯದ ಮೇಲೆ ದಾಳಿಮಾಡಿ ಮಹಾವೀರನ ವಿಗ್ರಹವನ್ನು ಸಾಗಿಸಿಕೊಂಡು ಹೋದನು.

ಆದಾಗಿ ಸ್ವಲ್ಪ ಕಾಲದಮೇಲೆ ಅಶೋಕನು ಕಳಿಂಗದ ಮೇಲೆ ದಂಡೆತ್ತಿದನು. ಕಳಿಂಗ ಪ್ರಜೆಗಳು ಅಶೋಕನ ಸೈನ್ಯವನ್ನು ಇದಿರಿಸಿ ಎಷ್ಟೋ ಮಂದಿ ವೀರಮರಣ ಹೊಂದಿದರು. ಆ ಯುದ್ಧದಲ್ಲಿ ನಡೆದ ರಕ್ತಪಾತವನ್ನು ನೋಡಿ ಅಶೋಕನಿಗೆ ಹೃದಯ ಪರಿವರ್ತನೆಯಾಯಿತು. ಆದರೆ ಕಳಿಂಗ ಪ್ರಜೆಗಳ ಜೀವಿತವು ಆ ಯುದ್ಧದಿಂದ ಛಿನ್ನಾಭಿನ್ನವಾಗಿ ಹೋಯಿತು.





ಮೌರ್ಯ ಸಾಮ್ರಾಜ್ಯದ ಐದನೇ ರಾಷ್ಟ್ರವಾಗಿ ಕಳಿಂಗವು ಇರಬೇಕಾಯಿತು. ಮುಂದೆ ಅಶೋಕನ ಮರಣದ ಅನಂತರ ಸ್ವತಂತ್ರವಾಗಿ ಚೇತರಿಸಿಕೊಂಡಿತು. ಹಾಗಿರುವಾಗ ಮಹಾ ಚಂಡಮಾರುತದಿಂದ ಕಳಿಂಗದ ಗ್ರಾಮಗಳೂ ಪಟ್ಟಣಗಳೂ ರಾಜಧಾನಿಯೂ ಸಹ ದೊಡ್ಡ ಅನಾಹುತಕ್ಕೊಳಗಾಯಿತು.



ರಾಜ್ಯವು ಇಂತಹ ಇಕ್ಕಟ್ಟಿನಲ್ಲಿರುವ ಸಮಯದಲ್ಲಿ ಖಾರವೇಲನೆಂಬ ಯುವಕನು ಕಳಿಂಗದ ಸಿಂಹಾಸನವೇರಿದನು. ಅವನು ತನ್ನ ಶಕ್ತಿ ಸಾಮರ್ಥ್ಯಗಳಿಂದ ದಿವಾರಾತ್ರಿ ಕಷ್ಟಪಟ್ಟು ಈಗಿನ ಭುವನೇಶ್ವರದ ಸಮೀಪದಲ್ಲಿ ಹೊಸ ರಾಜಧಾನಿಯನ್ನು ನಿರ್ಮಿಸಿದನು. ವ್ಯವಸಾಯ ವಾಣಿಜ್ಯಗಳಿಗೆ ಪ್ರೋತ್ಸಾಹ ಕೊಟ್ಟನು.

ಪ್ರಜೆಗಳಲ್ಲಿ ಆತ್ಮವಿಶ್ವಾಸ, ಸ್ವಾಭಿಮಾನಗಳು ಪುನರುದ್ಧಾರವಾಗುವಂತೆ ಖಾರವೇಲನು ಲಲಿತ ಕಲೆಗಳಿಗೂ ಪ್ರೋತ್ಸಾಹ ಕೊಟ್ಟನು. ಸಂಗೀತ ನಾಟ್ಯ ಮೊದಲಾದುವು ಪ್ರಜೆಗಳಿಗೆ ತುಂಬಾ ಸಂತೋಷವನ್ನುಂಟು ಮಾಡಿದುವು. ಎಷ್ಟೋ ವರ್ಷಗಳಿಂದ ಈತಿ ಬಾಧೆಗಳಿಗೀಡಾಗಿ ನೊಂದ ಪ್ರಜೆಗಳು, ಮತ್ತೆ ಸುಖಸಂತೋಷಗಳನ್ನು ಅನುಭವಿಸ ತೊಡಗಿದರು.






ಖಾರವೇಲನು ಇಷ್ಟರಿಂದ ತೃಪ್ತನಾಗಲಿಲ್ಲ. ಪ್ರಜೆಗಳಿಗೆ ಪೂರ್ತಿ ಸಂತೃಪ್ತಿಯುಂಟಾಗಬೇಕಾದರೆ ಇನ್ನೊಂದು ಘನಕಾರ್ಯ ಸಾಧಿಸಬೇಕೆಂದುಕೊಂಡನು. ಅದಕ್ಕಾಗಿ ಮೊದಲು ಬಲವಾದ ದೊಡ್ಡ ಸೈನ್ಯವನ್ನು ತಯಾರಿಸಲು ತೊಡಗಿದನು. ತನ್ನ ಸೈನಿಕ ಶಕ್ತಿಯ ಮೇಲೆ ಗಟ್ಟಿ ನಂಬುಗೆ ಬಂದ ಮೇಲೆ ಕಾರ್ಯ ರಂಗಕ್ಕೆ ಧುಮುಕಿದನು.

ಖಾರವೇಲನ ಗುರಿ ಮಗಧರಾಜ್ಯವಾಗಿತ್ತು. ಮಹಾವೀರಜಿನನ ವಿಗ್ರಹವನ್ನು ತನ್ನ ರಾಜಧಾನೀ ನಗರಕ್ಕೆ ತರುವುದರ ಮೂಲಕ ಹಿಂದೆ ನಡೆದ ಅವಮಾನವನ್ನು ತೊಳೆದು ಕೊಂಡರೇನೇ ಪೂರ್ಣ ತೃಪ್ತಿ. ಅಂತಲೇ ಕಳಿಂಗ ಸೈನ್ಯವು ಮಗಧದ ರಾಜಧಾನಿಯಾದ ರಾಜ ಗೃಹದ ಕಡೆಗೆ ದಾಳಿ ಹೊರಟಿತು.





ಅದೇ ಸಮಯದಲ್ಲಿ ಡಿಮಿಟ್ರಿಯಸ್ ಎಂಬ ಗ್ರೀಕು ರಾಜನು ತನ್ನ ಸೈನ್ಯದೊಂದಿಗೆ ಮಗಧದ ಮೇಲೆ ದಂಡೆತ್ತಿ ಬರುತ್ತಿದ್ದನು. ಹೀಗೆ ತನ್ನ ರಾಜಧಾನಿಯ ಮೇಲೆ ಎರಡು ಕಡೆಗಳಿಂದ ಶತ್ರುಗಳು ದಾಳಿ ಬರುವ ಸಂಗತಿ ತಿಳಿದು ಮಗಧ ರಾಜನು ಭಯಪಟ್ಟನು.

ಖಾರವೇಲನು ತನ್ನ ಸೈನ್ಯಗಳೊಡನೆ ಮಗಧ ರಾಜ್ಯದ ಎಲ್ಲೆಯಲ್ಲಿ ಬೀಡು ಬಿಟ್ಟಿದ್ದನು. ಆಗ ಡಿಮಿಟ್ರಿಯಸ್‌ನ ದೂತನೊಬ್ಬನು ಖಾರವೇಲನ ಬಳಿಗೆ ಬಂದು, ತಮ್ಮ ರಾಜನು ಅವನಿಗೆ ಜಯ ವನ್ನು ಬಯಸುವನೆಂದು ಹೇಳಿ, ರಾಜಗೃಹದ ಮೇಲೆ ತಾವಿಬ್ಬರೂ ಒಂದೇ ಸಾರಿ, ಒಂದೊಂದು ಕಡೆಯಿಂದ ದಾಳಿ ಮಾಡುವುದು ಒಳ್ಳೆಯದು ಎಂದು ಸೂಚಿಸಿದನು.





ಡ್ರಿಮಿಟಿಯಸ್‌ನ ವ್ಯೂಹವು ವಿಜಯಕ್ಕೆ ಸಮೀಪದ ದಾರಿಯೆಂದು ಖಾರವೇಲನಿಗೆ ತಿಳಿಯಿತು. ಆದರೆ ವಿದೇಶೀಯನಿಗೆ ಸ್ವದೇಶದಲ್ಲಿ ರಾಜ್ಯ ಭಾಗವನ್ನು ಜಯಿಸುವ ಅವಕಾಶ ಮಾಡಿ ಕೊಡುವುದು ಒಳ್ಳೆಯದಲ್ಲವೆಂಬ ನಿಶ್ಚಯಕ್ಕೇ ಬಂದನು. ಕೂಡಲೇ ಅವನು ಆ ಗ್ರೀಕರ ಮೇಲೆಯೇ ದಾಳಿ ಮಾಡಿ, ಅವರನ್ನು ಹೊಡೆದು ದೂರ ಓಡಿಸಿ ಬಿಟ್ಟನು.

ಅದೇ ವೇಗದಲ್ಲಿ ಖಾರವೇಲನು ಅನೇಕ ರಾಜ್ಯಗಳನ್ನು ಜಯಿಸಿ ಭಾರತದೇಶದ ಅನೇಕ ಪ್ರಾಂತಗಳಿಗೆ ಚಕ್ರವರ್ತಿಯಾದನು. ಅವನು ಮಗಧದ ಮೇಲೆ ದಂಡೆತ್ತಬೇಕೆಂದು ನೋಡುವಾಗ, ಮಗಧರಾಜನು, ಹಿಂದೆ ಕಳಿಂಗದಿಂದ ಎತ್ತಿಕೊಂಡು ಬಂದಿದ್ದ ಮಹಾವೀರಜಿನನ ವಿಗ್ರಹವನ್ನು ಸ್ನೇಹಪೂರ್ವಕವಾಗಿ ಖಾರವೇಲನಿಗೆ ಒಪ್ಪಿಸಿಕೊಟ್ಟನು. ಈ ವಿಧವಾಗಿ ಮಗಧ ಕಳಿಂಗ ಸೇನೆಗಳ ನಡುವೆ ಯುದ್ಧವು ನಿವಾರಿಸಲ್ಪಟ್ಟಿತು.






ಖಾರವೇಲನು ತನ್ನ ಪರಿಪಾಲನೆಯ ಕಾಲದಲ್ಲಿ ಜೈನಮತದ ಅಭಿವೃದ್ಧಿಗೆ ಎಷ್ಟೋ ಕೆಲಸ ಮಾಡಿದನು. ಜೈನ ಪಂಡಿತರ ಪರಿಷತ್ತನ್ನು ಏರ್ಪಡಿಸಿದನು. ಜೈನ ಸನ್ಯಾಸಿಗಳ ನಿವಾಸಕ್ಕಾಗಿ ಭುವನೇಶ್ವರದ ಸಮೀಪವಿರುವ ಉದಯಗಿರಿ, ಖಂಡಗಿರಿಗಳಲ್ಲಿ ಗುಹಾಲಯಗಳನ್ನು ನಿರ್ಮಿಸಿ ಕೊಡಿಸಿದನು.



# ಕೋದಂಡರಾಮು

ಕೆಲವು ದಶಕಗಳ ಹಿಂದೆ ನಾರಾಯಣ ಪಟ್ಟಣದಲ್ಲಿ ಭೋಗರಾಜನೆಂಬ ವರ್ತಕನೊಬ್ಬನಿದ್ದನು. ಅವನು ವ್ಯಾಪಾರದಲ್ಲಿ ಲಕ್ಷಕ್ಕೆ ಲಕ್ಷ ಲಾಭ ಸಂಪಾದಿಸುತ್ತ ಕೋಟೀಶ್ವರನೂ ಆದನು. ಈ ಬಗೆಯಾಗಿ ಲಾಭ ಬಂದರೆ ಕೋದಂಡರಾಮುನಿಗೆ ರಾಮು ಮುದ್ರೆಯ ನೂರು ಬಂಗಾರದ ಪವನು ಮಾಡಿಸಿ ಕಾಣಿಕೆ ಕೊಡುವೆನೆಂದು ಹರಕೆ ಹೇಳಿಕೊಂಡಿದ್ದನು. ಹಾಗೆಯೇ ಪವನುಗಳನ್ನು ಸಿದ್ಧಪಡಿಸಿಕೊಂಡು, ಹೊರಡಲು ಸಿದ್ಧನಾದನು.

ಮರುದಿನ ಬೆಳಗ್ಗೆ ಪ್ರಯಾಣವೆಂದುಕೊಂಡು ಎಲ್ಲಾ ಸಿದ್ಧತೆಯಲ್ಲಿರುವಾಗ, ರಾತ್ರಿಯಲ್ಲಿ ಯಾರೋ ಕಳ್ಳರು ಬಂದು ಪ್ರಯಾಣದ ಮುಖ್ಯ ಪೆಟ್ಟಿಗೆಯನ್ನು ಕದ್ದುಕೊಂಡು ಹೋದರು. ಭೋಗರಾಜನೂ, ಹೆಂಡತಿಯೂ, ಮಗ ಸುಂಕುರಾಜನೂ ಆ ಪೆಟ್ಟಿಗೆಗಾಗಿ ಮನೆಪೂರಾ ಹುಡುಕಿ ನೋಡಿದರು. ಹಿಂದಿನ ಬಾಗಿಲೊಂದು ತೆರೆದಿರುವುದು ಗೊತ್ತಾದ ಮೇಲೆ ಅದು ಕಳ್ಳರ ಕೆಲಸವೇ ಎಂಬುದು ಸ್ಪಷ್ಟವಾಯಿತು.

ಕಳ್ಳತನವಾದ ಸಂಗತಿಯನ್ನು ಕೋತ್ವಾಲ ಕಚೇರಿಯಲ್ಲಿ ಫಿರ್ಯಾದಿ ಮಾಡಲಾಯಿತು. ಆದರೆ ಕಳ್ಳರೂ ಸಿಗಲಿಲ್ಲ, ಹರಕೆಯ ಪೆಟ್ಟಿಗೆಯೂ ಸಿಗಲಿಲ್ಲ. ದೇವರಿಗೆ ಸೇರಬೇಕಾಗಿದ್ದ ಬಂಗಾರದ ಪವನುಗಳು ಕಳವಾಗಿ ಹೋದುದನ್ನು ನೆನೆದು ಭೋಗರಾಜನು ತುಂಬಾ ಸಂಕಟಪಟ್ಟನು. ಮತ್ತೆ ಕೋದಂಡರಾಮು ಮುದ್ರೆಯ ಪವನುಗಳನ್ನು ಮಾಡಿಸಬೇಕಾಗಿ ಬಂತು.

ಮುಂದೆ ಸುಮಾರು ಹದಿನೈದು ದಿನಗಳ ಮೇಲೆ ಒಂದುದಿನ ಯಾವನೋ ಒಬ್ಬನು ಬಂದು ಭೋಗರಾಜನಿಗೆ ಕೊಡುವಂತೆ ಒಂದು ಪತ್ರವನ್ನು ಕೊಟ್ಟುಹೋದನು. ಭೋಗರಾಜನು ಅದನ್ನು ಪಡೆದು ಓದಿ ನೋಡಿ ಆಶ್ಚರ್ಯಪಟ್ಟನು. ಆ ಪತ್ರದಲ್ಲಿ ಹೀಗಿತ್ತು:

"ಪೂಜ್ಯರೂ ಮಹಾದಾತರೂ ಆದ ಭೋಗರಾಜಾ ಅವರಿಗೆ ತುಂಬಾ ಆಭಾರಿಯಾದ ನಮಸ್ಕಾರಗಳು. ತಮ್ಮ ದಯದಿಂದ ನನ್ನ ಮಗಳು ಇಂದಿರೆಗೆ ಬರುವ ಆದಿತ್ಯವಾರ ವಿವಾಹವು ನಿಶ್ಚಯವಾಯಿತು. ಈ ಸಂದರ್ಭದಲ್ಲಿ ತಾವು ಮಾಡಿದ ಮಹೋಪಕಾರವನ್ನು ಎಂದೂ ಮರೆಯಲು ಸಾಧ್ಯವಿಲ್ಲ. ತಾವು ವಿವಾಹದ ದಿನ ಬಂದು ವಧೂವರರನ್ನು ಆಶೀರ್ವದಿಸಿ ನಮ್ಮನ್ನು

ಆರ್. ಎಸ್. ನಾರಾಯಣಮೂರ್ತಿ

ಸಂತೋಷಪಡಿಸಬೇಕಾಗಿ ಪ್ರಾರ್ಥಿಸಿಕೊಳ್ಳುತ್ತೇವೆ. ಇಂತು ಸಿಂಹಾದ್ರಿ, ಸೀತಾಪುರ."

ಈ ಕಾಗದವನ್ನು ತಂದವನಾಗಲೀ, ಅದನ್ನು ಕಳುಹಿಸಿದ ಸಿಂಹಾದ್ರಿಯಾಗಲೀ ಯಾರೆಂಬುದೇ ಭೋಗರಾಜನಿಗೆ ತಿಳಿಯಲಿಲ್ಲ. ತಾನು ಅವನಿಗೆ ಮಾಡಿದ ಸಹಾಯವೇನೆಂಬುದೂ ಗೊತ್ತಾಗಲಿಲ್ಲ. ಇದರ ಸಂಗತಿಯನ್ನು ಸ್ಪಷ್ಟಪಡಿಸಿಕೊಳ್ಳಲಿಕ್ಕಾಗಿ ಭೋಗರಾಜನು ಆದಿತ್ಯವಾರದ ದಿನ ಸೀತಾಪುರಕ್ಕೆ ಹೊರಟನು. ಅಲ್ಲಿ ಮದುವೆಯ ಗೌಜಿಯಲ್ಲಿರುವ ಸಿಂಹಾದ್ರಿಯ ಮನೆಯೂ ಸುಲಭದಲ್ಲಿ ಸಿಕ್ಕಿತು.

ಸಿಂಹಾದ್ರಿ ಅತ್ಯಾದರದಿಂದ ಭೋಗರಾಜನನ್ನು ಸ್ವಾಗತಿಸಿ ಗೌರವದ ಉಪಚಾರಗಳನ್ನು ಮಾಡಿ, "ನಿಜಕ್ಕೂ ಈ ಮದುವೆಗೆ ಬೇಕಾದ ಹಣದ ವ್ಯವಸ್ಥೆಗೆ ನಾನು ಪರದಾಡಿಕೊಂಡಿರುವಾಗ, ಎಲ್ಲಿಯೂ ಸಹಾಯವಿಲ್ಲದ ಪರಿಸ್ಥಿತಿಯಲ್ಲಿ ದೇವರಂತೆ ನೀವು ಹಣ ಕಳುಹಿಸಿ ಕಾಪಾಡಿದಿರಿ. ಜನ್ಮ ಜನ್ಮಕ್ಕೂ ನಿಮ್ಮನ್ನು ಮರೆಯಲಾರೆ" ಎಂದನು.

"ನಿಮಗೆ ಹಣ ತಂದುಕೊಟ್ಟದ್ದು ಯಾರು ?" ಎಂದು ಭೋಗರಾಜನು ಕೇಳಿದನು.

"ಯಾರೋ, ಅವನ ಹೆಸರು ಕೋದಂಡರಾಮ ನೆಂದ. ಈ ಹಣದಿಂದ ನಿಮ್ಮ ಮಗಳ ಮದುವೆ ಜರುಗಿಸಿಬಿಡಿ. ನಾರಾಯಣ ಪಟ್ಟಣದ ಭೋಗ ರಾಜರು ಕಳುಹಿಸಿದ್ದಾರೆ, ಅಂದ. ಅವನ ಹತ್ತಿರ ತಾನೇ ನೀವು ಕಳಿಸಿದ್ದು ?" ಎಂದ ಸಿಂಹಾದ್ರಿ.

ಭೋಗರಾಜನು ತನ್ನ ಆಶ್ಚರ್ಯವನ್ನು ಅಡಗಿಸಿ ಕೊಂಡು, ಹೂಂ ಹೂಂ, ಹೋ ಹೋ ಎಂದು ಏನೋ ಮರೆತು ನೆನಪು ಮಾಡಿಕೊಂಡಂತೆ ನಟಿಸಿ, ಅಲ್ಲಿ ಮದುವೆ ಮುಗಿದ ಮೇಲೆ ತನ್ನ ಊರಿಗೆ ಹಿಂದಿರುಗಿದನು.

ಮರುದಿನ ವಿಕ್ರಮಪುರದಿಂದ ಕೆಲವರು ರೈತರು ಬಂದು "ತಾವು ತೋಡಿಸಿದ ಬಾವಿಯಲ್ಲಿ ದಿವ್ಯನಾಗಿ ನೀರು ಬಂದಿದೆ. ಆ ಬಾವಿಯ ಪ್ರಾರಂಭೋತ್ಸವ ತಮ್ಮ ಕೈಯಿಂದಲೇ ಆಗಬೇಕು. ನಾಳಿದ್ದೇ ಮುಹೂರ್ತ!" ಎಂದು ಭೋಗರಾಜನನ್ನು



ಒತ್ತಾಯಿಸಿ ಕರೆದರು. ಭೋಗರಾಜನು ಅವರನ್ನು ವಿಚಿತ್ರವಾಗಿ ನೋಡಿದನು.

"ಆಗಲೇ ಮರೆತಿರಾ ಸ್ವಾಮಿ? ನೀರಿಲ್ಲದೆ ನಾನಾ ಬನ್ನಬಡುತ್ತಿರುವ ನಮ್ಮ ಗ್ರಾಮದವರಿಗೆ ಒಳ್ಳೆಯ ನೀರಿನ ಬಾವಿಯನ್ನು ತೋಡಿಸಲು ನಿಮ್ಮ ಆಳು ಕೋದಂಡರಾಮನ ಮೂಲಕ ಹಣಕೊಟ್ಟು ಕಳಿಸಿದಿರಲ್ಲ ಸ್ವಾಮಿ! ಯಾರಿಗೆ ಬಂದೀತು ಇಂಥಾ ಧರ್ಮಬುದ್ಧಿ?" ಎಂದರು ರೈತರು.

ಮತ್ತೆ ಕೋದಂಡರಾಮನೆ? ಭೋಗರಾಜನು ತನ್ನ ಆಶ್ಚರ್ಯವನ್ನು ಬಯಲುಮಾಡದೆ, ಏನೋ ನೆನಪುಮಾಡಿಕೊಂಡಂತೆ ಅಭಿನಯಿಸಿ ಅವರನ್ನು ಕಳುಹಿಸಿದನು. ಆಮೇಲೆ ನಿಶ್ಚಿತ ದಿನದಲ್ಲಿ ವಿಕ್ರಮ ಪುರಕ್ಕೆ ಹೋಗಿ, ಅಲ್ಲಿ ತೋಡಲ್ಪಟ್ಟ ಬಾವಿಗೆ ಪ್ರಾರಂಭೋತ್ಸವ ಮಾಡಿ, ಪ್ರಶಂಸೆಗಳನ್ನು ಪಡೆದು ಕೊಂಡು ಹಿಂದಿರುಗಿದನು.

ತಾನು ಹರಕೆ ತೀರಿಸಲು ಶೇಖರಿಸಿದ ಪವನು ಗಳನ್ನು ದೇವರಿಗೆ ಕೊಡಲಾಗದೆ ಹೋದ ತನ್ನ ಸಂಕಟಕ್ಕೆ, ಸಾಕ್ಷಾತ್ ಕೋದಂಡರಾಮನೇ ಕನಿಕರಿಸಿ ತನ್ನ ಹೆಸರಿನಲ್ಲಿ ಈ ಕೆಲಸಗಳನ್ನು ಮಾಡುವನೇನೋ ಎಂದು ಭೋಗರಾಜನಿಗೆ ಅನುಮಾನ ಉಂಟಾಯಿತು.

ಮತ್ತೊಂದು ದಿನ ಯಾವನೋ ಒಬ್ಬ ಅಪರಿ ಚಿತನು ಬಂದು, ಭೋಗರಾಜನಿಗೆ ಬಾಗಿ ನಮಸ್ಕಾರ ಮಾಡಿ, "ಮಹಾಸ್ವಾಮಿ, ನನ್ನ ಹೆಸರು ನಾಗರಾಜ. ನಾನು ಒಂದು ಭಯಂಕರವಾದ ರೋಗದಿಂದ ನರಳಿ ಕೊಂಡಿರುವಾಗ ವೈದ್ಯ ರಾಮಾಚಾರ್ರು ಪರೀಕ್ಷೆ ಮಾಡಿ, ಅದರ ಔಷಧಕ್ಕೆ ಬಂಗಾರ ಬೇಕು ಅಂದರು. ಶತದರಿದ್ರನಾದ ನಾನು ಬಂಗಾರವನ್ನು ಎಲ್ಲಿಂದ ತರಲಿ? ಸಾಯುವುದೇ ಖಂಡಿತವೆಂದು ಎಲ್ಲರೂ ಅಂದುಕೊಂಡೆವು. ಆ ಸಮಯದಲ್ಲಿ ನನ್ನ ಸಮಾಚಾರ ಹೇಗೋ ನಿಮಗೆ ತಿಳಿಯಿತೆಂದು ಕಾಣುತ್ತೆ. ನಿಮ್ಮ ಆಳು ಕೋದಂಡರಾಮನೆಂಬವನು ಬಂದು ನೀವು ಕಳುಹಿಸಿದಿರಿ ಅಂತ ನಿಮ್ಮ ಹೆಸರು ಹೇಳಿ ಔಷಧಿಗೆ ಬೇಕಾದಷ್ಟು ಬಂಗಾರಕೊಟ್ಟು ಹೋದನಂತೆ. ರಾಮಾಚಾರ್ರು ಅದನ್ನು ಪುಟಹಾಕಿ ಔಷಧ



ತಯಾರಿಸಿ ನನ್ನ ರೋಗ ಗುಣಪಡಿಸಿಬಿಟ್ಟರು. ತಮ್ಮ ದಯದಿಂದ ಬದುಕಿ ಮೇಲೆ ಬಿದ್ದೆ. ತಮಗೆ ಕೃತಜ್ಞತೆ ಹೇಳಬೇಕೆಂತಲೇ ಬಂದೆ." ಎಂದು ಮತ್ತೊಮ್ಮೆ ನಮಸ್ಕಾರ ಮಾಡಿದನು.

ಭೋಗರಾಜನು ಅವನ ಮುಖಕ್ಕೆ ತಕ್ಕಹಾಗೆ ಮಾತಾಡಿ, ಕೆಲವು ಹಣ್ಣುಗಳನ್ನು ಕೊಟ್ಟು ಕಳುಹಿಸಿದನು.

ಸ್ವಲ್ಪಹೊತ್ತಿಗೆ ಸ್ವರ್ಣಕಾರ ಚಿಕ್ಕಾಚಾರಿ ಬಂದು, ಭೋಗರಾಜನು ತಯಾರಿಸುವಂತೆ ಹೇಳಿದ ನೂರು ಕೋದಂಡರಾಮ ಮುದ್ರೆಯ ಪವನುಗಳನ್ನು ಕೊಟ್ಟು, ತನ್ನ ಮಜೂರಿಯನ್ನು ಪಡೆದುಕೊಂಡು ಹೊರಟುಹೋದನು.

ಭೋಗರಾಜನು ತನ್ನ ಹರಕೆ ತೀರಿಸಿಕೊಂಡು ಬರಲು ಮತ್ತೆ ಪ್ರಯಾಣ ಸನ್ನಾಹಕ್ಕೆ ತೊಡಗಿದನು. ಆ ಸಮಯದಲ್ಲಿ ಪಕ್ಕದ ಕೋಣೆಯಲ್ಲಿದ್ದ ಅವನ ಮಗ ಸುಂಕುರಾಜನು ಯಾರೊಂದಿಗೋ ಹೀಗೆ ಮಾತಾಡುವುದು ಕೇಳಿಸಿತು :

"ಏನಪ್ಪಾ, ಇನ್ನೆಷ್ಟು ಕಾಲ ಅಪ್ಪನನ್ನು ಮೋಸ ಪಡಿಸೋದು ? ನೀನು ಹೇಳಿದಂತೆ ಕೋದಂಡ ರಾಮನಾಗಿ ನಾನು ನಟಿಸಿದ್ದು ನೋಡಿ, ದೇವರೇ ತನ್ನ ಭಕ್ತಿಗೆ ಮೆಚ್ಚಿ ತನಗೆ ಕೀರ್ತಿ ಬರುವ ಹಾಗೆ ಮಾಡುವುದು ಅಂತ ನಂಬಿಬಿಟ್ಟಿದ್ದಾರೆ ಪಾಪ ! ಒಟ್ಟಿನ ಮೇಲೆ ನಾವು ಅಪ್ಪನಿಗೆ ಮೋಸಮಾಡಿ ಸಂಪಾದಿಸಿದ ಬಂಗಾರದ ಪವನುಗಳು ಒಳ್ಳೆಯ ಕೆಲಸಗಳಿಗೆ ವಿನಿಯೋಗವಾಯಿತು. ಮತ್ತೆ ಅವರು ಸಿದ್ಧಪಡಿಸಿದ ಪವನುಗಳನ್ನು ಅವರ ಇಷ್ಟಕ್ಕೇ ಬಿಟ್ಟುಬಿಡುವ, ಆಗದೆ ? "

ತನ್ನ ಮಗನು ಮಾತಾಡುತ್ತಿರುವುದು ಅವನ ಸ್ನೇಹಿತ ಆನಂದನೊಂದಿಗೆ ಎಂದು ಭೋಗರಾಜನಿಗೆ ಗೊತ್ತಾಯಿತು. ಮರುದಿನ ಅವನು ತನ್ನ ಮಗನನ್ನು ಕರೆದು, ಅವನ ಕೈಗೆ ಬಂಗಾರದ ಪವನಿನ ಚೀಲವನ್ನು ಕೊಡುತ್ತ, "ಮಗನೇ, ಇನ್ನು ನಾನು ಹರಕೆ ಸಲ್ಲಿಸುವ ಆಲೋಚನೆ ಬಿಟ್ಟೆನಪ್ಪಾ. ಈ ಬಂಗಾರದ ನಾಣ್ಯಗಳನ್ನು ಕೂಡಾ ನೀನೇ ಸದ್ವಿನಿಯೋಗ ಮಾಡಿಬಿಡು. ನನ್ನ ಕಿವಿಗೆ ಬೀಳುವ ಹಾಗೆ ನಿನ್ನೆ ನೀನೂ ಆನಂದನೂ ಮಾತಾಡಿಕೊಂಡು ದನ್ನು ಕೇಳಿ ಎಲ್ಲಾ ಗೊತ್ತಾಯಿತು. ಕೋದಂಡ ರಾಮನಿಗೆ ನಾನು ಕೊಡುವ ಪವನುಗಳು ಸದ್ವಿನಿಯೋಗವಾಗುವುದೋ ಇಲ್ಲವೋ ನಾನು ನೋಡಲಾಗುವುದಿಲ್ಲ. ಆದರೆ ನೀನು ಮಾಡಿಸುವ ಒಳ್ಳೇ ಕೆಲಸಗಳು ಸಂತೋಷವನ್ನೂ ಸಂತೃಪ್ತಿ ಯನ್ನೂ ಉಂಟುಮಾಡಿವೆ" ಎಂದನು.

ತನ್ನ ತಂದೆಯಲ್ಲಾದ ಬದಲಾವಣೆಯನ್ನು ನೋಡಿ ಮಗನಿಗೂ ಸಂತೋಷವಾಯಿತು.



# ಮೂಲಕಾರಣ

ಭೀಮನು ಬಡವ. ಅವನು ರಖಂ ವ್ಯಾಪಾರಿಗಳ ಹತ್ತಿರ ಹಣ್ಣುಗಳನ್ನು ಕೊಂಡು ಕೊಂಡು, ಬುಟ್ಟಿಯಲ್ಲಿ ತುಂಬಿಸಿ ಮನೆಮನೆ ತಿರುಗಿ ವ್ಯಾಪಾರ ಮಾಡುತ್ತಿದ್ದನು.

ಅವನ ವಾಡಿಕೆದಾರದಲ್ಲಿ ಶರಭಣ್ಣಯ್ಯನವರೊಬ್ಬರು ದೊಡ್ಡ ಮನಸ್ಸಿನವರು. ಭೀಮನು ಅಲ್ಪ ಸ್ವಲ್ಪ ಲಾಭಕ್ಕಾಗಿ ದಿನಾ ಬಿಸಿಲಿನಲ್ಲಿ ಹಣ್ಣು ಬುಟ್ಟಿ ಹೊತ್ತು ವ್ಯಾಪಾರ ಮಾಡುವುದನ್ನು ನೋಡಿ ಅವರು ಕನಿಕರಪಟ್ಟು, "ಅಲ್ಲ ಭೀಮಾ, ದಿನಾ ಹೀಗೆ ತಿರುಗಿ ಕಷ್ಟಪಡುವುದಕ್ಕಿಂತ ಒಂದೇ ಕಡೆಯಲ್ಲಿ ಅಂಗಡಿ ತೆರೆದು ವ್ಯಾಪಾರ ಮಾಡಬಾರದೆ ?" ಎಂದು ಕೇಳಿದರು.

ಅದಕ್ಕೆ ಬೇಕಾದಷ್ಟು ಹಣ ತನ್ನಲ್ಲಿ ಸೇರುವುದೇ ಇಲ್ಲವೆಂದನು ಭೀಮ. ಶರಭಣ್ಣಯ್ಯ ಅವನಿಗೆ ಸಾವಿರ ರೂಪಾಯಿ ಸಾಲಕೊಟ್ಟು, ಆದರಿಂದ ಹಣ್ಣಿನಂಗಡಿ ತೆರೆಯುವಂತೆಯೂ, ತನ್ನ ಸಾಲವನ್ನು ನಿಧಾನವಾಗಿ ತೀರಿಸುವಂತೆಯೂ ಹೇಳಿದರು. ಭೀಮ ಒಪ್ಪಿದ್ದ.

ಸಾವಿರ ರೂಪಾಯಿಯಿಂದ ಹಣ್ಣಿನಂಗಡಿ ತೆರೆಯುವುದಕ್ಕಿಂತ ಜೀನಸಿನಂಗಡಿ ತೆರೆಯುವುದೇ ಒಳ್ಳೆಯದೆಂದು ಭೀಮನ ಹೆಂಡತಿ ಹೇಳಿದಳು. ಅದರಂತೆ ಭೀಮನು ಜೀನಸಿನ ಅಂಗಡಿ ತೆರೆದನು.

ಅದರಿಂದ ಲಾಭಕ್ಕೆ ಬದಲಾಗಿ ಹಾಕಿದ ಹಣ ಕೂಡಾ ಹೋಯಿತು.

ಅವನು ಶಭಣ್ಣಯ್ಯನ ಬಳಿಗೆ ಹೋಗಿ ಸಂಗತಿ ಹೇಳಿ, "ನನ್ನದು ನಷ್ಟಜಾತಕ ! ನನ್ನ ಹಣೇಬರೆಹ ! ಮತ್ತೆ ಹಣ್ಣಿನ ಬುಟ್ಟಿ ಹೊತ್ತು ಮನೆಮನೆ ತಿರುಗಿ, ತಮ್ಮ ಸಾಲ ಕೊಡುತ್ತೇನೆ, ಅಯ್ಯಾ !" ಎಂದನು.

"ನಷ್ಟ ಜಾತಕವೂ ಅಲ್ಲ, ಹಣೇ ಬರೆಹವೂ ಅಲ್ಲ. ನಿನಗೆ ಚೆನ್ನಾಗಿ ತಿಳಿದ ಹಣ್ಣಿನ ವ್ಯಾಪಾರ ಮಾಡುವುದು ಬಿಟ್ಟು, ಬೇರೆ ವ್ಯಾಪಾರ ಮಾಡಿದ್ದರಿಂದಲೇ ನಷ್ಟಕ್ಕೆ ಬಿದ್ದೆ. ಇನ್ನೊಂದು ಸಾವಿರ ಕೊಡುತ್ತೇನೆ. ಹಣ್ಣಿನ ಅಂಗಡಿಯೇ ತೆರೆ !" ಎಂದರು ಶರಭಣ್ಣಯ್ಯ.

ಭೀಮ ಹಾಗೆಯೇ ಮಾಡಿ ನಿಜಕ್ಕೂ ಒಳ್ಳೆಯ ಸ್ಥಿತಿಗೆ ಬಂದನು.






ಒಂದು ಊರಿನಲ್ಲಿ ರಾಮನಾಥ ಮತ್ತು ರಂಗನಾಥ ಎಂಬವರು ಒಳ್ಳೆಯ ಸ್ನೇಹಿತರಾಗಿದ್ದರು. ಅವರ ಮನೆಗಳೂ ನೆರೆಕರೆಯಾಗಿಯೇ ಇದ್ದುದರಿಂದ ಎರಡು ಕುಟುಂಬಗಳೂ ಒಂದೇ ಕುಟುಂಬದ ಹಾಗೆ ಬೆರೆತು ಕೊಂಡಂತೆಯೇ ಇದ್ದುವು.

ಒಂದು ವಿಷಯದಲ್ಲಿ ಮಾತ್ರ ರಾಮನಾಥ ರಂಗನಾಥರೊಳಗೆ ವ್ಯತ್ಯಾಸವಿದ್ದಿತು. ರಾಮನಾಥನು ಯಾವ ಕಾರ್ಯಮಾಡುವುದಾದರೂ ಶಕುನ ನೋಡಿ ಕೊಳ್ಳುವನು. ಒಳ್ಳೆಯ ಶಕುನ ನೋಡದೆ ಎಲ್ಲಿಗೂ ಹೋಗುವವನಲ್ಲ. ಒಳ್ಳೆಯ ಶಕುನವಾದರೆ ಸರಿ ಹೋಯಿತು; ಥಕ್ಕನೆ ಏನಾದರೂ ಕೆಟ್ಟ ಶಕುನ ಇದಿರಾಗಿಬಿಟ್ಟರೆ ಎಷ್ಟೇ ಅಗತ್ಯವಾದ ಕೆಲಸವಾದರೂ ಮಾಡದೆ ನಷ್ಟಕ್ಕೆ ಒಳಗಾಗುವನೇ ಹೊರತು, ಶಕುನ ವನ್ನು ಮಾತ್ರ ನಂಬಿಕೊಂಡೇ ಇದ್ದನು,

ಗಂಡನ ಈ ಪದ್ಧತಿ ಅವನ ಹೆಂಡತಿಗೆ ಹಿಡಿಸು ತ್ತಿರಲಿಲ್ಲ. ಶಕುನ ಒಳ್ಳೆಯದಾದರೂ ಕೆಟ್ಟುದಾದರೂ ಆಗಬೇಕಾದುದು ಆಗಿಯೇ ತೀರುತ್ತದೆಂಬುದರಲ್ಲಿ ಅವಳಿಗೆ ಗಟ್ಟಿ ನಂಬುಗೆಯಿದ್ದಿತು. ಗಂಡನಿಗೆ ನಯ ವಾಗಿ ಅನೇಕಬಾರಿ ಹೇಳಿದ್ದಳು, ಗಂಡನಿಗೆ ಅದೇನೂ ನಾಟಲಿಲ್ಲ. ಆದರೆ ಗಂಡನಿಗೆ ಗಟ್ಟಿಯಾಗಿ ಬುದ್ಧಿ ಹೇಳಲು ಅವಳಿಂದಾಗಲಿಲ್ಲ. ಹೇಗಾದರೂ ತನ್ನ ಗಂಡನನ್ನು ಈ ಶಕುನದ ಹುಚ್ಚಿನಿಂದ ಬಿಡಿಸುವ ಭಾರವನ್ನು ಅವಳು ರಂಗನಾಥನಿಗೆ ಒಪ್ಪಿಸಿಬಿಟ್ಟಳು. ರಂಗನಾಥನು ಒಂದು ಉಪಾಯ ಆಲೋಚನೆಮಾಡಿ, ರಾಮನಾಥನ ಹೆಂಡತಿಗೆ ಏನು ಮಾಡಬೇಕೆಂಬು ದನ್ನು ವಿವರಿಸಿ ಹೇಳಿದನು.

ಆ ದಿನ ರಾತ್ರಿ ರಾಮನಾಥನಿಗೆ ಬಡಿಸುವಾಗ, ಅವನ ಹೆಂಡತಿ ಅವನೊಂದಿಗೆ "ಇವತ್ತು ರಂಗನಾಥಣ್ಣಯ್ಯನಿಗೆ ನಿಮ್ಮ ಪರವಾಗಿ ನೂರು ರೂಪಾಯಿ ನಾನೇ ಕೊಟ್ಟೆ. ಅತ್ಯಗತ್ಯದ ಕೆಲಸ ವಾದ್ದರಿಂದ ನನ್ನ ಕೈಯಿಂದಲೇ ತೆಗೆದುಕೊಂಡು ಹೋದ" ಎಂದಳು.

"ನನ್ನ ಪರವಾಗಿ ಅಂದರೆ, ನೂರು ರೂಪಾಯಿಯೇ? ನಾನು ಕೊಡಬೇಕೆ? ಏಕೆ?" ಎಂದು ರಾಮನಾಥ ಆಶ್ಚರ್ಯದಿಂದ ಕೇಳಿದ.

"ಅದೇ ನೋಡಿ, ನಿನ್ನೆ ರಂಗನಾಥಣ್ಣಯ್ಯ ಒಂದು ಮುಖ್ಯ ಕೆಲಸದ ಮೇಲೆ ಹೋಗುತ್ತಿದ್ದಾಗ ನೀವು ಎದುರು ಬಂದಿರಂತೆ! ಅವನಿಗೆ ಹೋದ ಕೆಲಸ

ಎಂ. ಬಿ. ಮೂರ್ತಿ

ಹಾಳಾದ್ದುಮಾತ್ರವಲ್ಲದೆ ನೂರು ರೂಪ್ಾಯಿ ಕೂಡಾ ಕಳೆದು ಹೋಯಿತಂತೆ. ನಿಮ್ಮ ದರ್ಶನ ಒಳ್ಳೇ ಶಕುನ ಅಂದುಕೊಂಡದ್ದು ನಷ್ಟವೇ ಆದ್ದರಿಂದ ಆ ನಷ್ಟಕ್ಕೆ ನೀವೇ ಹೊಣೆ ಅಂತ, ಹಣದ ಅಗತ್ಯದ ಅವಸವಿರುವುದನ್ನು ಕೂಡಾ ಹೇಳಿದ. ನಿಜವೇ ತಾನೇ, ನ್ಯಾಯ ತಾನೇ ಅಂದುಕೊಂಡು ಕೊಟ್ಟೆ." ಎಂದಳು ಹೆಂಡತಿ.

"ಇದೆಂಥಾ ಮೋಸ! ಹೀಗೂ ಮಾಡೋದಂದರೆ? ಈಗಲೇ ಹೋಗಿ ವಿಚಾರಿಸಿಬಿಡ್ತೇನೆ!" ಎಂದು ರಾಮನಾಥನು ರಂಗನಾಥನ ಮನೆಗೆ ದಾಳಿಹೋದನು.

ಅವನನ್ನು ನೋಡಿದ ಕೂಡಲೇ ರಂಗನಾಥನು ತನ್ನ ಉಪಾಯ ನಾಟಿತೆಂದು ಸಂತೋಷಿಸುತ್ತ, "ಕೂತುಕೋ ರಾಮನಾಥ್!" ಎಂದು ಸ್ವಾಗತಿಸಿದನು.

"ಕೂಡಲಿಕ್ಕೆ ಬಂದಿಲ್ಲ. ಅದೇನು ಸಮಾಚಾರಾ ಅಂತ ಕೇಳಲಿಕ್ಕೇ ಬಂದೆ." ಎಂದ ರಾಮನಾಥ ಅಗ್ನಿಯ ಮೇಲಿನ ಗುಗ್ಗುಳದಂತೆ.

"ಏನು ವಿಷಯ ?" ಎಂದು ಏನೂ ಅರಿಯ ದವನಂತೆ ಕೇಳಿದ ರಂಗನಾಥ.

"ಅದೇ, ನನ್ನ ಹೆಂಡತಿಯ ಹತ್ತಿರ ಏನೋ ಹೊಲ್ಲದ್ದು ಹೇಳಿ ತೆಗೆದುಕೊಂಡೆಯಲ್ಲಾ ನೂರು ರೂಪಾಯಿ ? ಇದೆಂಥ ನ್ಯಾಯ? " ಎಂದನು ರಾಮನಾಥ.

"ಓಹೋ! ಅದೋ? ಅದರಲ್ಲಿ ತಪ್ಪೇನಿದೆ ? ನೀನು ನನ್ನ ಎದುರಾಗಿ ಬಂದ ಶಕುನ ನನಗೆ ನಷ್ಟವನ್ನುಂಟುಮಾಡಿತಲ್ಲ ? ಆದ್ದರಿಂದ ನ್ಯಾಯವಾಗಿ ಆ ನಷ್ಟ ನೀನು ತಾನೇ ಕೊಡಬೇಕು? ನನ್ನಿಂದ ನಿನಗೇನಾದರೂ ನಷ್ಟವಾದರೆ ಹೇಳು. ನಾನೂ ಕೊಡುತ್ತೇನೆ." ಎಂದ ರಂಗನಾಥ.

"ಇದೊಳ್ಳೇ ಮೋಂಟು ಮಾತು. ನಾನು ನಿನ್ನ ಎದುರು ಬರುವುದಕ್ಕೂ ನಿನ್ನ ಅಜಾಗ್ರತೆಯಿಂದ ನಿನ್ನ ಹಣ ಕಳೆದು ಹೋಗುವುದಕ್ಕೂ ಏನು ಸಂಬಂಧ ? ನಾನು ಬಂದದ್ದು ಶಕುನವಾಗುತ್ತೆಯೆ?" ಎಂದನು ರಾಮನಾಥ.

ರಾಮನಾಥ ನೆಗಾಡುತ್ತ, "ಹಾಗಾದರೆ ಶಕುನ ವನ್ನು ನೋಡಬಾರದು ಅಂತ ಹೇಳು. ಶಕುನಕ್ಕೂ ಲಾಭ ನಷ್ಟಗಳಿಗೂ ಸಂಬಂಧವಿಲ್ಲಾ ಅಂತ ಒಪ್ಪಿಕೋ. ಸರಿಯಷ್ಟೆ? ನಿನ್ನವಳಿಂದ ನಾನು ಹಣ ತೆಗೆದು ಕೊಳ್ಳಲೂ ಇಲ್ಲ, ಕೇಳಲೂ ಇಲ್ಲ. ನಷ್ಟವಾಗಲೂ ಇಲ್ಲ. ನಿನ್ನ ಶಕುನದ ಹುಚ್ಚು ಹೋಗಲಿಕ್ಕೇ ನಿನ್ನವಳ ಒಪ್ಪಿಗೆಯಿಂದಲೇ ಈ ಉಪಾಯ ಮಾಡಿದೆವು. ಕೆಲಸ ಮುಖ್ಯವೇ ಹೊರತು ಶಕುನವಲ್ಲ" ಎಂದು ರಾಮನಾಥನ ಬೆನ್ನು ತಟ್ಟಿದನು.

ಆ ಮೇಲೆ ರಾಮನಾಥನು ಶಕುನ ನೋಡುವು ದನ್ನು ಪೂರ್ತಿಯಾಗಿ ಬಿಟ್ಟನು.





# ಇಬ್ಬರು ಮೋಸಗಾತಿಯರು

೨

ದಿಲೈಲಾ ಹೇಳಿದಂತೆ ಹಾಜ್ ಮುಹಮ್ಮದನು ತನ್ನ ಅಂಗಡಿಯನ್ನು ನೋಡಿಕೊಂಡಿರುವಂತೆ ಕೆಲಸದವನಿಗೆ ಹೇಳಿ, ಅಲ್ಲಿಂದ ಹೊರಟನು.

ಆ ಸಮಯದಲ್ಲಿ ದಿಲೈಲಾ ತಾನು ಮೂಟೆಯನ್ನಿಟ್ಟಿದ್ದ ಅಂಗಡಿಗೆ ಹೋಗಿ, ತನ್ನ ಮೂಟೆಯನ್ನು ತೆಗೆದುಕೊಂಡು ಮತ್ತೆ ಹಾಜ್ ಮುಹಮ್ಮದನ ಅಂಗಡಿಗೇ ಬಂದು, ಅಲ್ಲಿದ್ದ ಕೆಲಸದವನೊಂದಿಗೆ, "ನಿನ್ನ ಯಜಮಾನ್ರು ರೊಟ್ಟಿಯಂಗಡಿಯಲ್ಲಿದ್ದಾರಪ್ಪ. ನಿನ್ನನ್ನು ಈಗಲೇ ಅಲ್ಲಿಗೆ ಬರಲಿಕ್ಕೆ ಹೇಳಿದ್ದಾರೆ. ಹೋಗಪ್ಪ. ನೀನು ಮತ್ತೆ ಬರುವವರೆಗೆ ನಾನು ಅಂಗಡಿ ನೋಡಿಕೊಳ್ಳುತ್ತೇನೆ" ಎಂದಳು. ಅವಳನ್ನು ಈ ಮೊದಲೇ ನೋಡಿದ್ದ ಕೆಲಸದವನು ಅಂಗಡಿಯನ್ನು ಬಿಟ್ಟು ಹೊರಟುಹೋದನು.

ಆ ಕೂಡಲೇ ದಿಲೈಲಾ ಅಂಗಡಿಯೊಳಗಿರುವ ಸಾಮಾನುಗಳಲ್ಲಿ ಎತ್ತಿಕೊಳ್ಳಲು ಸಾಧ್ಯವಾದುವುಗಳನ್ನೆಲ್ಲಾ ಆರಿಸಿ ಒಂದು ಬದಿಯಲ್ಲಿಟ್ಟಳು, ಅಂಗಡಿಯ ಮುಂದೆ ಹೇಸರಗತ್ತೆಯನ್ನು ಸಾಗಿಸಿಕೊಂಡು ಹೋಗುವ ಒಬ್ಬ ಹುಡುಗನನ್ನು ಕರೆದು, "ಅಪ್ಪಾ, ನಿನಗೆ ಈ ಅಂಗಡಿ ಯಜಮಾನ ಗೊತ್ತುತಾನೆ? ಅವನು ನನ್ನ ಮಗನೇ. ಅವನನ್ನು ಸಾಲಗಾರ್‍ರು ಬಂದು ಎಳೆದುಕೊಂಡು ಹೋಗಿಬಿಟ್ಟರು. ಇದೆಲ್ಲಾ ಊರವರ ಸಾಮಾನು. ಸಾಲದವರು ಎತ್ತಿಕೊಂಡು ಹೋದಾರು ಅಂತ ಭಯವಾಗಿದೆ. ಇವುಗಳನ್ನೆಲ್ಲಾ ನಿನ್ನ ಕತ್ತೆಯ ಮೇಲೆ ನನ್ನ ಮನೇವರೆಗೆ ಸಾಗಿಸಿಕೊಳ್ಳುತ್ತೇನೆ. ಇಕೋ ಒಂದು ದೀನಾರ ತೆಗೆದುಕೋ, ನಾನು ಮತ್ತೆ ಬರುವವರೆಗೆ ನೀನು ಈ ಅಂಗಡಿಯಲ್ಲಿರುವ ನೀಲೀ ದ್ರಾವಕದ ಸೀಸೆಗಳನ್ನೂ, ಮರದ ಸಾಮಾನುಗಳನ್ನೂ ಮುರಿದು ಹಾಳುಮಾಡಿಬಿಡು. ಸಾಲದವರು ಎಲ್ಲಾ ಜಪ್ತಿಮಾಡಿಕೊಂಡು ಹೋದಾರು. ಸಾವಕಾಶವಾಗಿ ಸಾಲ ತೀರಿಸುತ್ತೇವೆಂದರೆ ಹೀಗೆಲ್ಲಾ ಬಲವಂತ ಮಾಡುತ್ತಾರೆ!" ಅವರಿಗೇನೂ ಸಿಗದಂತೆ ಮಾಡಬೇಕು ಎಂದಳು.

ಕತ್ತೆಯ ಹುಡುಗನು ಹಾಗೆಯೇ ಮಾಡಲು ಒಪ್ಪಿದನು. ದಿಲೈಲಾ ಸಾಮಾನುಗಳನ್ನೆಲ್ಲಾ ಕತ್ತೆಯ ಮೇಲೆ ಹಾಕಿ, ಅದನ್ನು ಸಾಗಿಸಿಕೊಂಡು ಹಿಂದಿರುಗಿ ನೋಡದೆ ತನ್ನ ಮನೆಗೆ ಹೋದಳು. ತಾಯಿಯನ್ನು



ನೋಡಿದ ಕೂಡಲೇ ಮಗಳು ಜೀನಾಬ್, "ಏನು ಮಾಡಿಕೊಂಡು ಬಂದೆಯಮ್ಮಾ? ಅಪಾಯ ವೇನೂ ಇಲ್ಲವಷ್ಟೆ?" ಎಂದು ಆತುರದಿಂದ ಕೇಳಿದಳು.

"ಹಾಗೇನಿಲ್ಲಮ್ಮ! ನಾಲ್ಕು ಮಂದೀ ಕಣ್ಣಿಗೆ ಧೂಳು ಹಾಕಿ ಬಿಟ್ಟೆನು. ಇದಿಷ್ಟೂ ಒಬ್ಬ ಅಧಿಕಾರಿಯ ಹೆಂಡತಿಯ ನಗಗಳು. ಇವು ಒಬ್ಬ ಅಂಗಡಿಗಾರನ ಅಂಗೀ ಚೀಲಹಣ. ಇವೆಲ್ಲಾ ರಂಗಾರೀ ವರ್ತಕನ ಸಾಮಾನುಗಳು. ಈ ಕತ್ತೆ ನಾಲ್ಕನೇಯವನದು!" ಎಂದಳು ದಿಲ್ಲೈಲಾ ಹೆಮ್ಮೆಯಿಂದ ನಗುತ್ತಾ.

"ಚೆನ್ನಾಗೇ ಇದೆ ಅಮ್ಮಾ! ಇನ್ನು ಮನೆಬಿಟ್ಟು ಕದಲಬೇಡ. ಆ ನಾಲ್ವರೂ ಊರೊಳಗೆಲ್ಲಾ ತಿರುಗುತ್ತಾ ನಿನ್ನನ್ನು ಹುಡುಕಿ ಕೊಂಡಿದ್ದಾರು!" ಎಂದಳು ಜೀನಾಬ್.

"ಹುಚ್ಚೀ! ನನ್ನನ್ನು ಏನಂದ್ಕೊಂಡೆ! ಇನ್ನೂ ನನ್ನ ಕೆಲಸ ಸಾಸಿವೆಯ ಅರ್ಧದಷ್ಟೂ ಆಗಿಲ್ಲ!" ಎಂದಳು ದಿಲ್ಲೈಲಾ.

ಆಗ ಅತ್ತ ರಂಗಾರೀ ವರ್ತಕನು ರೊಟ್ಟಿಯ ಅಂಗಡಿಯಲ್ಲಿ ತಿಂಡಿಗಳನ್ನು ಕೊಂಡು ಕೊಂಡು ಕಟ್ಟಿ ಕೊಳ್ಳುತ್ತಿರುವಾಗ, ಕೆಲಸದವನು ಬಂದು "ಬರಲಿಕ್ಕೆ ಹೇಳಿದಿರಲ್ಲ, ಏಕೆ?" ಎಂದು ಕೇಳಿದನು. ನಾನೆಲ್ಲಿ ಕರೆದೆನೆಂದು ರಂಗಾರೀ ಅವನ ಮೇಲೆ ಕೋಪಿಸಿ, ಅನುಮಾನಗೊಂಡು ಬೇಗ ಬೇಗನೆ ತನ್ನ ಅಂಗಡಿಗೆ ಹಿಂದಿರುಗಿದನು. ಅಲ್ಲಿ ಕತ್ತೆಯ ಹುಡುಗನು ಅಂಗಡಿಯನ್ನೆಲ್ಲಾ ಧ್ವಂಸಮಾಡುವುದನ್ನು ನೋಡಿ ಗಾಬರಿಯಾಗಿ "ಯಾರೋ ನೀನು? ಏನು ಕೆಲಸವಿದು? ನಿನ್ನನ್ನು ಹೊಂಡದೊಳಗೆ ಹುಗಿಯಾ!" ಎಂದು ಕೂಗಾಡಿದನು ರಂಗಾರೀ.

"ನಿಮ್ಮನ್ನು ಸಾಲದವರು ಬಿಟ್ಟರಷ್ಟೇ? ನಿಮ್ಮ ಅಮ್ಮ ಎಲ್ಲಾ ಹೇಳಿದರು!" ಎಂದು ಆ ಹುಡುಗ ಹೇಳಿದ. ಅವರಿಬ್ಬರೂ ಒಬ್ಬರನ್ನೊಬ್ಬರು ಅರ್ಥ ಮಾಡಿಕೊಳ್ಳಲಿಕ್ಕೆ ಸ್ವಲ್ಪ ಹೊತ್ತೇ ಹಿಡಿಯಿತು. ಕಡೆಗೆ "ಎಲ್ಲಿ ಆ ಮುದುಕಿ?" ಎಂದು ರಂಗಾರೀ ವರ್ತಕನೂ, "ನನ್ನ ಕತ್ತೆ ಏನಾಯಿತು?" ಎಂದು ಕತ್ತೆಯ ಹುಡುಗನೂ ಲಬಲಬನೆ ಬಡೆದುಕೊಂಡರು. ಸುತ್ತಲೂ ಅನೇಕ ಮಂದಿ ಕೂಡಿದರು. ಆಮೇಲೆ ಎಲ್ಲರೂ ಕೂಡಿ ರಂಗಾರೀ ವರ್ತಕನ ಮನೆಯ ಕಡೆಗೆ ಸಾಗಿದರು.

ರಂಗಾರೀ ತನ್ನ ಮನೆಯ ಕೆಳಗಿನ ಭಾಗದ ಬಾಗಿಲು ತಟ್ಟಲು, ಅಂಗಿ ಇಲ್ಲದೆ ಬರಿ ಮೈಯಿಂದಿದ್ದ ಮೊಹಸಿನ್ ಬಾಗಿಲು ತೆರೆದನು. "ಇರುವೆಯಾ? ಕಳ್ಳ ಭಡವಾ! ನಿನ್ನ ಅಮ್ಮ ಎಲ್ಲಿಯೋ?" ಎಂದು ರಂಗಾರೀ ಅರಚಿದನು. "ನನ್ನ ಅಮ್ಮ ಸತ್ತು ಬಹಳ ವರ್ಷ ಆಯಿತಲ್ಲ?" ಎಂದ ಮೊಹಸಿನ್. ಅವರಿಬ್ಬರೂ ತಗಾದೆ ತೆಗೆದು ಅರ್ಥಮಾಡಿಕೊಳ್ಳಲಿಕ್ಕೆ ಮತ್ತಿಷ್ಟು ಹೊತ್ತಾಯಿತು. ಕಡೆಗೆ ಮೊಹಸಿನ್, "ಆ ಮುದುಕಿ ತನ್ನ ಮಗಳನ್ನು ನನಗೆ ಮದುವೆ ಮಾಡಿಕೊಡುವೆ



ನೆಂದು ಕರೆದುಕೊಂಡು ಬಂದಳು. ಆವರು ಮಾಳಿಗೆ ಯಲ್ಲೇ ಇದ್ದಾರೆ !" ಎಂದನು.

ರಂಗಾರೀ ಮಾಳಿಗೆಯ ಮೆಟ್ಟಿಲು ಹತ್ತಿ ಹೋಗಿ ಬಾಗಿಲು ತಟ್ಟಲು ಖಾತೂನ್ ಬಾಗಿಲು ತೆರೆದು, "ಎಲ್ಲಿ ಹೋದೆ ಸನ್ಯಾಸಿಯಮ್ಮಾ !" ಎಂದು ಗಾಬರಿಯಾದಳು. "ಯಾವ ಸನ್ಯಾಸಿಯಮ್ಮ ? ನಿನ್ನ ಅಮ್ಮ ಎಲ್ಲಿ ?" ಎಂದು ಕೇಳಿದ ರಂಗಾರೀ ವರ್ತಕ. "ನನ್ನ ಅಮ್ಮ ಹೋಗಿ ಎಷ್ಟು ಕಾಲವಾಯಿತೋ !" ಎಂದಳು ಖಾತೂನ್.

ಇಲ್ಲಿಯೂ ಗುಂಪು ಸೇರಿತು. ಒಬ್ಬರಿಂದೊಬ್ಬರು ಮಾತಾಡಿಕೊಂಡ ಮೇಲೆ ಮೋಸವು ಹೇಗೆ ನಡೆಯಿ ತೆಂಬುದು ಗೊತ್ತಾಯಿತು. ಖಾತೂನಳನ್ನು ಅವಳ ಮನೆಗೆ ಕಳುಹಿಸಿಕೊಟ್ಟು, ಉಳಿದ ಮೂವರೂ ನಗರ ರಕ್ಷಕನಾದ ಖಾಲೀದನ ಬಳಿಗೆ ಹೋಗಿ ನಡೆದ ಸಂಗತಿಯನ್ನೆಲ್ಲಾ ಹೇಳಿಕೊಂಡರು. ಖಾಲೀದ್ ಅತ್ಯಾಶ್ಚರ್ಯದಿಂದ ಅವರು ಹೇಳಿದ ಸಮಾಚಾರವನ್ನೆಲ್ಲಾ ಕೇಳಿ, "ಈ ಮಹಾ ನಗರದಲ್ಲಿ ರುವ ಸಾವಿರಾರು ಮುದುಕಿಯರಲ್ಲಿ ನಿಮ್ಮನ್ನು ಮೋಸಪಡಿಸಿದವಳನ್ನು ಹೇಗೆ ಹಿಡಿಯುವುದು ? ಒಂದು ಮಾಡಿ. ನೀವೇ ಹೇಗಾದರೂ ಶ್ರಮಪಟ್ಟು ಅವಳನ್ನು ಹಿಡಿದು ತನ್ನಿ. ನಾನು ಖಂಡಿತವಾಗಿ ಶಿಕ್ಷಿಸಿ ಬಿಡುತ್ತೇನೆ" ಎಂದನು.

ಬೇರೆ ಉಪಾಯ ಕಾಣದೆ ಮೋಸ ಹೋದ ಮೂವರೂ ಮುದುಕಿಯನ್ನು ಹುಡುಕುತ್ತಾ ಮೂರು ದಿಕ್ಕುಗಳಿಗೆ ಹೊರಟರು.

ಇಷ್ಟರಲ್ಲಿ ದಿಲೈಲಾ ತಾನು ಧರಿಸಿಕೊಂಡ ಸೂಫೀ ಸಂನ್ಯಾಸಿನೀ ವೇಷವನ್ನು ಪೂರ್ತಿಬಿಟ್ಟು, ಶ್ರೀಮಂತರೊಬ್ಬರ ಮನೆಯ ಕೆಲಸದವಳ ಹಾಗೆ ವೇಷ ಬದಲಾಯಿಸಿಕೊಂಡಳು. ಹೀಗೆ ಸಿದ್ಧಳಾಗಿ ತನ್ನ ಪ್ರತಾಪದಿಂದ ಬಾಗ್ದಾದಿನ ಪೌರರನ್ನು ಹುರಿದು ಮುಕ್ಕಲಿಕ್ಕಾಗಿ ಮತ್ತೆ ಹೊರಟಳು. ಅವಳು ಒಂದು ಚಿಕ್ಕ ಸಂದು ಬೀದಿಯಲ್ಲಿ ಹೋಗುತ್ತಿದ್ದಾಗ, ಒಂದು ಮನೆಯಲ್ಲಿ ಏನೋ ವೈಭವ ನಡೆಯುತ್ತಿತ್ತು.

ಒಳಗೆ ದಿಂಬು, ಜಮಖಾನೆಗಳನ್ನು ಓರಣವಾಗಿ ಅಲಂಕರಿಸಿದ್ದರು. ಮೇಳತಾಳಗಳೂ ದೀಪಗಳೂ, ಹಾಡುಗಳೂ, ವಿನೋದ ಕೋಲಾಹಲಗಳೂ ಕಾಣುತ್ತಿದ್ದುವು. ಮನೆಯ ಹೆಬ್ಬಾಗಿಲಲ್ಲಿ ಗುಲಾಮಿ ಯೊಬ್ಬಳು ಚಿಕ್ಕ ಹುಡುಗನನ್ನು ಕಂಕುಳಲ್ಲಿಟ್ಟು ಕೊಂಡಿದ್ದಳು. ಆ ಕಂದನ ಶರೀರದಲ್ಲಿ ಬಂಗಾರದ ಜರಿಗಳ ಪೋಷಾಕುಗಳಿದ್ದುವು. ರತ್ನಖಚಿತ ಆಭರಣ ಗಳೂ, ಮುತ್ತಿನ ಗೊಂಡೆಯ ಟೊಪ್ಪಿಯೂ ಹುಡುಗ ನನ್ನು ಅಲಂಕರಿಸಿದ್ದುವು. ಅವನು ಆ ಮನೆಯವರ ಮಗನೇ ನಿಜ.

ಆ ಮನೆಯ ಒಡೆಯ ಬಾಗ್ದಾದಿನಲ್ಲಿ ವ್ಯಾಪಾರಿ ಗಳಿಗೆಲ್ಲಾ ಹಿರಿಯನಾಗಿದ್ದನು. ಆ ದಿನ ಅವನ ಕುಮಾರಿಗೆ ಶುಭ ಸಮಾರಂಭವೇನೋ ನಡೆಯು



ತಿದ್ದಿತು. ವರ್ತಕ ಶ್ರೇಷ್ಠನ ಹೆಂಡತಿ ಬಂದವರಿಗೆ ಉಪಚರಿಸಲು ಬಿಡದೆ ಚಿಕ್ಕ ಮಗ ಅವಳನ್ನು ಹಿಡಿದು ಹಟ ಮಾಡಿಕೊಂಡಿದ್ದುದರಿಂದ ಅವಳು ಅವನನ್ನು ಗುಲಾಮಿ ಸೇವಕಿಯ ಕೈಗೆ ಕೊಟ್ಟು, ಬಂದವರು ಹೋಗುವವರೆಗೆ ಆಡಿಸಿಕೊಂಡಿರಲು ಹೇಳಿದ್ದಳು. ಈ ಸಂಗತಿಯನ್ನೆಲ್ಲ ದಿಲ್ಲೈಲಾ ಬೀದಿಯಲ್ಲಿ ನಿಂತೇ ಕಂಡು ಹಿಡಿದಳು. ಆ ಹುಡುಗನ ಶರೀರದ ಮೇಲಿದ್ದ ಸಂಪತ್ತನ್ನು ಅಪಹರಿಸಬೇಕೆಂದು ಅವಳಿಗೆ ದುರ್ಬುದ್ಧಿ ಹುಟ್ಟಿತು.

ದಿಲ್ಲೈಲಾ ಜನರ ಗುಂಪನ್ನು ತಳ್ಳಿಕೊಂಡು ಹೆಬ್ಬಾಗಿಲ ಬಳಿಗೆ ಬರುತ್ತಾ, "ಅಮ್ಮಮ್ಮಾ! ನನ್ಮನೇ ಕೆಲ್ಸಕ್ಕೆ ಮಣ್ಣು ಹಾಕ! ಬರುವಾಗ ಹೊತ್ತಾಗೇ ಹೋಯ್ತು" ಎಂದು ಗಟ್ಟಿಯಾಗಿಯೇ ಹೇಳಿದಳು. ತರುವಾಯ ಒಂದು ನಡೆಯದ ನಾಣ್ಯವನ್ನು ತೆಗೆದು ಆ ಗುಲಾಮಿ ದಾಸಿಯ ಕೈಯಲ್ಲಿಟ್ಟು, "ನಿಮ್ಮ ಹಳೇ ದಾಸಿ ಕಣೇ ನಾನು! ಇಂಥಾ ಶುಭ ಕಾರ್ಯಕ್ಕೆ ಬಾರದಿದ್ರೆ ಆಗುತ್ತೆಯೆ? ಹಳೇ ದಾಸಿ ಉಮಾಲ್‌ಖಯರ್ ಸಲಾಮು ಹೇಳಲು ಬಂದಿದ್ದಾಳೆ ಅಂತ ಅಮ್ಮಾವರ ಹತ್ತಿರ ಹೇಳಿ ಬಾ ತಾಯಿ!" ಎಂದಳು. ಗುಲಾಮಿ ಆ ನಾಣ್ಯವನ್ನು ಪಡೆದುಕೊಂಡು "ಈ ಹುಡುಗ ಅಮ್ಮನ್ನ ಕಂಡರೆ ಸಾಕು ಸೆರಗು ಹಿಡಿದು ಮತ್ತೆ ಬಿಡದೆ ಹಟ ಮಾಡುತ್ತಾನಲ್ಲಾ? ನಾನು ಹೇಗೆ ಹೋಗಲಮ್ಮಾ?" ಎಂದಳು. "ನೀನು ಬರುವವರೆಗೆ ನಾನು ಇವನನ್ನು ಎತ್ತಿಕೊಳ್ತೇನೆ ಬಿಡು!" ಎಂದು ದಿಲ್ಲೈಲಾ "ಬಾರೋ ನನ್ ಬಂಗಾರು ಕಂದ! ನಾನು ನಿನ್ನಜ್ಜಿ ಕಣೋ!" ಎಂದು ಕೈ ಚಾಚಿದಳು.

ಗುಲಾಮಿದಾಸಿ ಅವಳ ಮಾತನ್ನು ನಂಬಿ ಹುಡುಗನನ್ನು ದಿಲ್ಲೈಲಾಳ ವಶಕ್ಕೆ ಕೊಟ್ಟು ಒಳಗೆ ಹೋದಳು.

ಕೂಡಲೇ ದಿಲ್ಲೈಲಾ ಹುಡುಗನನ್ನು ಮಂಗಾಡಿ ಸುತ್ತ ಎತ್ತಿಕೊಂಡು ನಿರ್ಜನವಾದೊಂದು ಮೂಲೆಗೆ ಹೋಗಿ ಅವನ ಮೈಮೇಲಿನ ಬೆಲೆ ಬಾಳುವ ನಗಗಳನ್ನೂ, ಜರಿ ಬಟ್ಟೆಗಳನ್ನೂ ಸುಲಿದುಕೊಂಡಳು. ತರುವಾಯ ಆ ಹುಡುಗನನ್ನು ಎತ್ತಿಕೊಂಡು ಸರಾಫ ಅಂಗಡಿಗೆ ಹೋದಳು. ಅಲ್ಲಿಯ ವರ್ತಕನು ವರ್ತಕ ಶ್ರೇಷ್ಠನ ಕುಮಾರನ ಗುರುತು ಹಿಡಿದು, "ಏನಮ್ಮಾ? ನಿಮ್ಮ ಯಜಮಾನರಿಗೆ ಏನಾಗಬೇಕಂತೆ?" ಎಂದು ದಿಲ್ಲೈಲಾಳನ್ನು ಕೇಳಿದನು.

"ಈ ಹುಡುಗನ ಅಕ್ಕನಿಗೆ ಶೋಭನ ನಡಿಯುತ್ತದಷ್ಟೆ? ಈಗ ಒಂದು ಜತೆ ಬಂಗಾರದ ಬಳೆಗಳು, ಎರಡು ಜತೆ ಬಂಗಾರದ ವಂಕಿಗಳು, ಒಂದು ಜತೆ ಮುತ್ತಿನ ಬೆಂಡೋಲೆ, ಗಿಣಿಚಿತ್ರದ ವಡ್ಯಾಣ ಬೇಕಂತೆ. ಮೊತ್ತ ಸಾವಿರ ದಿನಾರಗಳಿಗೆ ಕಡಿಮೆಯಾಗದಂತೆ ನೋಡಿಕೊಂಡರೆ ಸರಿ. ಒಡವೆಗಳನ್ನು ಒಯ್ದು ಅಮ್ಮಾವರಿಗೆ ತೋರಿಸಿ ಹಿಡಿಸಿದರೆ ಹಣ ತೆಗೆದುಕೊಂಡು ಈಗಲೇ ಬರುತ್ತೇನೆ, ಅದುವರೆಗೆ ಬೇಕಾದರೆ ಈ ಹುಡುಗ ಇಲ್ಲಿರುತ್ತಾನಂತೆ. ಏನೋ!

ನನ್‌ರಾಜಾ! ಇಲ್ಲಿರ್ತ್ಯಾ ?" ಎಂದಳು ದಿಲ್ಲೈಲಾ. "ಹಾಗೇ ಕೊಡುತ್ತೇನೆ. ಅದಕ್ಕಾಗಿ ಕುಮಾರನ್ನ ಇಲ್ಲಿ ಬಿಡುವುದೇನೂ ಬೇಡ" ಎಂದ ರತ್ನವರ್ತಕ. ದಿಲೈಲಾ ಅಲ್ಲಿ ಸಿಕ್ಕಿದುದನ್ನೆಲ್ಲಾ ತೆಗೆದುಕೊಂಡು, ಹುಡುಗನನ್ನು ಅಂಗಡಿಯ ಹತ್ತಿರ ಕೆಳಗಿಳಿಸಿ, ಸೀದಾ ತನ್ನ ಮನೆಗೆ ಹೋದಳು.

ವರ್ತಕನ ಮನೆಯಲ್ಲಿ ಸಂತೋಷ ಸಮಾರಂಭವು ಶೋಕಸಮುದ್ರವಾಗಿ ಮಾರ್ಪಟ್ಟಿತು. ವರ್ತಕನ ಪತ್ನಿ ಮಗನನ್ನು ಕಾಣದೆ, ಅಡಿ ಮೇಲು ಮಾಡಿ ಅಳುತ್ತಿದ್ದಳು. ಹುಡುಗನ ಜಾಡು ಯಾರಿಗೂ ಗೊತ್ತಾಗಲಿಲ್ಲ. ವರ್ತಕನು ಬಹಳ ಹೊತ್ತು ಹುಡುಕಿಸಿದ ಮೇಲೆ ರತ್ನವರ್ತಕನ ಸರಾಫ ಅಂಗಡಿಯ ಹತ್ತಿರ ಹುಡುಗ ಸಿಕ್ಕಿದ.

ವರ್ತಕಶ್ರೇಷ್ಠನು ಅಂಗಡಿಯವನನ್ನು ಬಯ್ಯುತ್ತ "ನನ್ನ ಮಗನನ್ನು ಇಲ್ಲಿಗೆ ತಂದು ಹಾಗೇಕೆ ಬಿಟ್ಟಿರುವೆ ? ಅವನ ಮೈಮೇಲಿದ್ದ ನಗಗಳೂ ದುಸ್ತುಗಳೂ ಏನಾದುವು ?" ಎಂದನು.

"ಇಲ್ಲಿ ಬಿಡಬೇಕಾಗಿಲ್ಲ ಅಂದೆನಲ್ಲಾ ? ನಿಮ್ಮ ದಾಸಿ ನಿಮ್ಮ ಪತ್ನೀ ಸಾಹೇಬರಿಗೆ ತೋರಿಸಿಬರಲು ಸಾವಿರ ದೀನಾರಗಳ ನಗಗಳನ್ನು ಒಯ್ದಳು. ಅವಳನ್ನು ಕೇಳಿರಿ" ಎಂದ ಅಂಗಡಿಯ ವರ್ತಕ. ಇಬ್ಬರೂ ಒಬ್ಬರನ್ನೊಬ್ಬರು ಅರ್ಥಮಾಡಿಕೊಳ್ಳಲು ಸ್ವಲ್ಪ ವೇಳೆ ಹಿಡಿಯಿತು. ಆ ಸಮಯಕ್ಕೆ ದಿಲೈಲಾಳಿಂದ ಮೋಸ ಹೋದ ಮೊದಲನೇ ಮೂವರೂ ಅಲ್ಲಿಗೆ ಬಂದರು. ಎಲ್ಲರನ್ನೂ ಮೋಸ ಪಡಿಸಿದವಳು ಒಬ್ಬಳೇ ಮುದುಕಿ ಎಂದು ಸ್ಪಷ್ಟವಾಗಿ ಹೋಯಿತು. ಒಬ್ಬರ ಕಥೆ ಒಬ್ಬರೊಡನೆ ಹೇಳಿಕೊಂಡಾಗ ಎಲ್ಲವೂ ಬೆಳಕಿಗೆ ಬಂತು.

"ಈ ಮುದಿ ಹೆಣದವಳ ಭೂತಕ್ಕೆ ಅಂತ್ಯ ಕಾಣಿಸದೆ ನಾನು ನಿದ್ದೆ ಮಾಡಲಾರೆ" ಎಂದು ವರ್ತಕ ಶ್ರೇಷ್ಠನು ಶಪಥ ಹಾಕಿಕೊಂಡನು. ರತ್ನವರ್ತಕನು ಉಳಿದ ಮೂವರೊಂದಿಗೆ, "ನಿಮ್ಮೊಂದಿಗೆ ನಾನು ಕೂಡಾ ಆ ಮುದುಕೀನ ಹಿಡಿಯಲು ಬರುತ್ತೇನೆ. ಆದರೆ ಎಲ್ಲರೂ ಕೂಡಿ ಹೋಗುವುದರಿಂದ ಲಾಭ ವಿಲ್ಲ. ನಾವು ಬೇರೆ ಬೇರೆ ದಾರಿಯಲ್ಲೇ ಶೋಧನೆ ನಡೆಸಬೇಕು. ಮಧ್ಯಾಹ್ನದಲ್ಲಿ ಎಲ್ಲರೂ ಹಜ್ ಮಸೂದ್ ಎಂಬ ಹಜಾಮನ ಅಂಗಡೀ ಹತ್ತಿರ ಕಲೆತುಕೊಳ್ಳೋಣ" ಎಂದನು.

ಮಧ್ಯಾಹ್ನದ ಹೊತ್ತಿಗೆ ಕತ್ತೆಯ ಹುಡುಗನು ಮಸೂದ್ ಹಜಾಮನ ಅಂಗಡಿಯ ಹತ್ತಿರ ಬರುತ್ತಿದ್ದಾಗ, ದಿಲೈಲಾ ಅವನ ಕಣ್ಣಿಗೆ ಬಿದ್ದಳು. ಅವಳು ವೇಷ ಬದಲಾಯಿಸಿಕೊಂಡಿದ್ದರೂ ಅವನು ಅವಳನ್ನು ಗುರುತಿಸಿ, "ಸಿಕ್ಕಿದೆಯಾ ಕಳ್ಳಮುದುಕೀ !" ಎಂದು ಅರಚಿದನು. (ಇನ್ನೂ ಇದೆ)






ಒಂದು ಸಾರಿ ದೇವತೆಗಳೂ ರಾಕ್ಷಸರೂ ತಮ್ಮೊಳಗಿನ ದ್ವೇಷವನ್ನು ಬಿಟ್ಟು, ಒಗ್ಗಟ್ಟಾಗಿ ಕ್ಷೀರ ಸಾಗರವನ್ನು ಮಥನ ಮಾಡಿ ಅಮೃತವನ್ನು ಸಾಧಿಸಿಕೊಂಡರು. ಅಮೃತವನ್ನು ಸಾಧಿಸುವಾಗ ಒಗ್ಗಟ್ಟಾಗಿದ್ದ ರಾಕ್ಷಸ ದೇವತೆಗಳೊಳಗೆ ಅದನ್ನು ಹಂಚಿಕೊಳ್ಳುವ ವಿಷಯದಲ್ಲಿ ಜಗಳವೆದ್ದಾಗ, ಮಹಾವಿಷ್ಣು ಜಗನ್ಮೋಹಕವಾದ ರೂಪದ ಮೋಹಿನೀ ಅವತಾರ ತಾಳಿ, ರಾಕ್ಷಸರನ್ನು ವಂಚಿಸಿ, ಅಮೃತವು ದೇವತೆಗಳ ಪಾಲಿಗೇ ಸಿಗುವಂತೆ ಮಾಡಿದನು. ಆದರಿಂದ ರಾಕ್ಷಸರು ದೇವತೆಗಳಿಗೆ ನಿರಂತರ ದ್ವೇಷಿಗಳಾದರು.

ಅಮೃತಪಾನದಿಂದ ಅಮರರೆನಿಸಿಕೊಂಡ ದೇವತೆಗಳು ಗರ್ವದಿಂದ ತಿರುಗಾಡಲು ತೊಡಗಿದರು. ರಾಕ್ಷಸರು ಒಳಗೊಳಗೇ ಕುದಿಯತೊಡಗಿದರು. ಏನು ಮಾಡಿದರೂ ಅಮೃತಪಾನದಿಂದ ಅಮರರಾದ ದೇವತೆಗಳನ್ನು ಪೀಡಿಸಬಹುದೇ ಹೊರತು, ಕೊಲ್ಲಲು ಸಾಧ್ಯವಿರಲಿಲ್ಲ. ಆದರೂ ದೇವತೆಗಳನ್ನು ಗತಿಯಿಲ್ಲದವರನ್ನಾಗಿ ಮಾಡಿ, ದಾನವರಿಗೆ ನಡೆದ ಅನ್ಯಾಯಕ್ಕಾಗಿ ದೇವತೆಗಳ ಮೇಲೆ ಹಗೆ ತೀರಿಸಿಕೊಳ್ಳಲೇಬೇಕೆಂಬ ನಿಶ್ಚಯದಲ್ಲಿ ತಾರಕಾಸುರನು ಘೋರವಾದ ತಪಸ್ಸಿಗೆ ಕುಳಿತನು. ಅವನು ಬ್ರಹ್ಮನನ್ನು ಧ್ಯಾನಿಸುತ್ತ ತಪಸ್ಸು ಮಾಡುತ್ತಿರಲು, ಬ್ರಹ್ಮನು ಅವನ ಮುಂದೆ ಪ್ರತ್ಯಕ್ಷನಾದನು.

ಅವನನ್ನು ನೋಡಿ ತಾರಕಾಸುರನು ತನಗೆ ಸಾವೇ ಬಾರದಂತೆ ವರ ಬೇಕೆಂದು ಕೇಳಿದನು.

"ಹುಟ್ಟಿದವನು ಒಂದು ದಿನ ಸಾಯಲೇಬೇಕೆಂಬುದು ನನ್ನ ವಿಧಿ ವರವೇ ಆಗಿದೆ. ಆದುದರಿಂದ ಬೇರೊಂದು ವರವನ್ನು ಕೇಳು" ಎಂದನು ಬ್ರಹ್ಮ.

ತಾರಕಾಸುರನು ಚೆನ್ನಾಗಿ ಆಲೋಚನೆ ಮಾಡಿ ಶಿವನ ಮಗನಿಂದಲ್ಲದೆ ಬೇರೆ ಯಾರಿಂದಲೂ ಯಾವ ವಿಧದಿಂದಲೂ ತನಗೆ ಸಾವು ಬಾರದಂತೆ ವರವನ್ನು ಕೇಳಿ ಪಡೆದನು.

೨. ಚಿತ್ರಗಣಪತಿ



ಆಗ ಶಿವನಿಗೆ ಹೆಂಡತಿಯೇ ಇರಲಿಲ್ಲ. ಶಿವನ ಹೆಂಡತಿಯಾಗಿದ್ದ ಸತೀದೇವಿ ದಕ್ಷಯಜ್ಞದಲ್ಲಿ ಅವಮಾನಿತಳಾಗಿ ತನ್ನ ಯೋಗಾಗ್ನಿಯಿಂದ ಭಸ್ಮೀಭೂತಳಾಗಿ ಹೋಗಿದ್ದಳು. ಸಂತಾನವಿಲ್ಲದೆ, ಪತ್ನೀವಿಯೋಗಗೊಂಡ ಶಿವನು ಮಹಾ ವೈರಾಗ್ಯವಂತನಾಗಿ, ಉನ್ಮತ್ತನಂತೆ ತಿರುಗಿ ತಿರುಗಿ ಕಡೆಗೆ ಹಿಮಾಲಯ ಪರ್ವತಗಳಲ್ಲಿ ಒಂದುಕಡೆ ತಪಸ್ಸು ಮಾಡುತ್ತ ಕುಳಿತುಬಿಟ್ಟಿದ್ದನು. ಈ ಸಂಗತಿ ಗೊತ್ತಿದ್ದೇ ತಾರಕಾಸುರನು ಹಾಗೆ ವರ ಕೇಳಿ ಪಡೆದಿದ್ದನು, ಶಿವನು ಇನ್ನು ಮದುವೆಯಾಗಲಿಕ್ಕೂ ಇಲ್ಲ, ಮಗ ಹುಟ್ಟಲಿಕ್ಕೂ ಇಲ್ಲ ಎಂಬುದು ತಾರಕಾಸುರನ ಗಟ್ಟಿ ನಂಬುಗೆ.

ಆನಂತರ ತಾರಕಾಸುರನು ನಿರ್ಭೀತನಾಗಿ ರಾಕ್ಷಸರನ್ನೆಲ್ಲಾ ಒಟ್ಟುಗೂಡಿಸಿ ವಿಜೃಂಭಿಸುತ್ತ ದೇವತೆಗಳಿಗೆ ಮಹಾ ಕಂಟಕಪ್ರಾಯನಾದನು. ಮೂರು ಲೋಕಗಳನ್ನೂ ಆಕ್ರಮಿಸಿಕೊಂಡು ಹಗೆ ತೀರಿಸಿಕೊಳ್ಳುವ ಹುಮ್ಮಸ್ಸಿನಲ್ಲಿ ದೇವತೆಗಳಿಗೆ ಚಿತ್ರಹಿಂಸೆ ಕೊಡತೊಡಗಿದನು. ಈ ಹಿಂಸೆಯನ್ನು ಅನುಭವಿಸುವುದಕ್ಕಿಂತ ಸಾಯುವುದೇ ಮೇಲೆನಿಸಿ ತಾವೇಕೆ ಅಮೃತಪಾನ ಮಾಡಿದೆವೋ ಎಂದು ದೇವತೆಗಳಿಗೆ ತೋರ ತೊಡಗಿತು. ಕಡೆಗೆ ಅವರೆಲ್ಲಾ ಕೂಡಿ ಯೋಚಿಸಿ, ಉಪಾಯಗಾಣದೆ, ಸತ್ಯಲೋಕಕ್ಕೆ ಹೋಗಿ, ಬ್ರಹ್ಮನೊಂದಿಗೆ ತಮ್ಮ ಗೋಳನ್ನು ಹೇಳಿಕೊಂಡು ಕಾಪಾಡುವಂತೆ ಪ್ರಾರ್ಥಿಸಿದರು.

"ಯಾವುದಕ್ಕೂ ಮೊದಲು ಶಿವನಿಗೆ ಮಗ ಹುಟ್ಟಬೇಕು. ಅವನಿಂದಲೇ ತಾರಕಾಸುರನು ಸಾಯಬೇಕಾಗಿದೆ. ಬೇರೆ ಯಾವ ಉಪಾಯವೇನಿಲ್ಲ. ಅವನು ನನ್ನಿಂದ ಆ ರೀತಿಯಾಗಿ ವರ ಪಡೆದಿದ್ದಾನೆ. ಶಿವಕುಮಾರನೊಬ್ಬನಿಂದ ಹೊರತು ಅವನು ಸಾಯಲು ಸಾಧ್ಯವಿಲ್ಲ. ಶಿವನು ವಿರಾಗಿಯಾಗಿರುವುದರಿಂದ ಅವನಿಗೆ ಪುತ್ರೋದಯವಾಗುವ ಬಗೆ ಹೇಗೋ ನಾನು ಹೇಳಲು ಸಾಧ್ಯವಿಲ್ಲ. ನಡೆಯಿರಿ. ವಿಷ್ಣುವಿನ ಬಳಿಗೆ ಹೋಗಿ ಕೇಳೋಣ. ಉಪಾಯ ಮಾಡುವುದರಲ್ಲಿ ಅವನೇ ಸಮರ್ಥನು" ಎಂದು ಬ್ರಹ್ಮನು ದೇವತೆಗಳನ್ನು ಕರೆದುಕೊಂಡು ಮಹಾವಿಷ್ಣುವಿನ ಬಳಿಗೆ ಹೋದನು.

ವಿಷ್ಣು ದೇವತೆಗಳ ಸಮಸ್ಯೆಯನ್ನು ಕೇಳಿ ಹೀಗೆಂದನು: "ಎಲ್ಲದಕ್ಕೂ ಮೊದಲು ವಿರಾಗಿಯಾದ ಶಿವನಿಗೆ ಮದುವೆಯಾಗಬೇಕು. ದಕ್ಷಯಜ್ಞದಲ್ಲಿ ದೇಹವನ್ನು ಬಿಟ್ಟ ಸತೀದೇವಿ ಹಿಮವಂತನ ಮಗಳಾಗಿ ಹುಟ್ಟಿ ಬೆಳೆಯುತ್ತಾ ಇದ್ದಾಳೆ. ಆ ಪರ್ವತಕುಮಾರಿಗೆ ಶಿವನೊಂದಿಗೆ ಮದುವೆಯಾಗುವ ಹಾಗೆ ಪ್ರಯತ್ನಿಸಿರಿ ಶಿವನ ವೈರಾಗ್ಯ ಹೋಗುವಂತೆ ಮಾಡಬೇಕಾದುದನ್ನು ಮಾಡಿರಿ. ಆಮೇಲೆ ನಿಮ್ಮ ಸಮಸ್ಯೆ ತೀರುತ್ತದೆ".

ವಿಷ್ಣುವಿನ ಮಾತಿನಂತೆ ಮಾಡಲು ನಿಶ್ಚಯಿಸಿದ ದೇವತೆಗಳು, ಮೊದಲು ನಾರದನನ್ನು ಹಿಮವಂತನ

ಮನೆಗೆ ಕಳುಹಿಸಿದರು. ಹಿಮವಂತನೊಂದಿಗೆ ಪಾರ್ವತಿಗೆ ತಿಳಿಯುವ ಹಾಗೆ ನಾರದನು ಶಿವನ ವೃತ್ತಾಂತವನ್ನು ಹೇಳಿ, ಹಿಮವಂತನನ್ನು ತಪಸ್ಸಿನಲ್ಲಿರುವ ಶಿವನ ಬಳಿಗೆ ಕಳುಹಿಸಿದನು. ಹಿಮವಂತನು ಶಿವನನ್ನು ಪೂಜಿಸಿ, ಅವನ ತಪಸ್ಸಿಗೆ ಅನುಕೂಲವಾಗುವಂತೆ ತನ್ನ ಕುಮಾರಿ ಪಾರ್ವತಿ ಸೇವೆ ಮಾಡಲು ಶಿವನ ಅನುಮತಿಯನ್ನು ಪ್ರಾರ್ಥಿಸಿದನು.

ಶಿವನು ಮೌನವಾಗಿದ್ದರೂ ಅದನ್ನೇ ಅಂಗೀಕಾರವೆಂದುಕೊಂಡು ಹಿಮವಂತನು, ಮಗಳನ್ನು ಶಿವನ ಪರಿಚರ್ಯೆಗಳಿಗೆ ಬಿಟ್ಟು ಹಿಂದಿರುಗಿದನು. ಇದು ಪಾರ್ವತಿಗೂ ಹಿತಕರವಾಗಿತ್ತು.

ಚಿಕ್ಕಂದಿನಿಂದಲೇ ಪಾರ್ವತಿಗೆ ಶಿವನೆಂದರೆ ಬಹಳ ಇಷ್ಟ. ಬಾಲ ಪಾರ್ವತಿಗೆ ನಾರದನು ಆಗಾಗ ಬಂದು ಅನೇಕ ಕಥೆಗಳೊಂದಿಗೆ ಶಿವನ ಮಹಿಮೆಗಳನ್ನು ಕುರಿತು ಕೂಡಾ ಹೇಳುತ್ತ ಬಂದಿದ್ದನು. ಪಾರ್ವತಿ ಕೂಡಾ ಶಿವನ ಹೆಸರನ್ನು ಕೇಳಿದಕೂಡಲೇ ಕಿವಿಗಳನ್ನು ಆಗಲಿಸಿಕೊಂಡು ಶಿವನ ಗುಣಗಣಗಳನ್ನೂ, ಮಹಿಮೆಗಳನ್ನೂ ಬಿಂಬಿಸುವ ಕಥೆಗಳನ್ನು ಕೇಳಲು ಕುತೂಹಲಪಡುತ್ತಿದ್ದಳು. ಮದುವೆಯಾದರೆ ಶಿವನನ್ನೇ ಮದುವೆಯಾಗಬೇಕೆಂದೇ ನಿಶ್ಚಯಪಡಿಸಿಕೊಂಡಿದ್ದಳು. ಅಂತಹ ಮನೋರಮಣನೇ ಪ್ರತ್ಯಕ್ಷ ತಪಸ್ಸಿನಲ್ಲಿರುವಾಗ, ಅವನ ಪರಿಚರ್ಯೆ ಮಾಡುವ ಸಂದರ್ಭ ಬಂದುದು ತನ್ನ ಭಾಗ್ಯವೆಂದೇ ಭಾವಿಸಿದಳು.

ಅವಳು ಬೆಳಂಜಾಮದಲ್ಲಿ ಶಿವನು ತಪಸ್ಸು ಮಾಡುತ್ತಿರುವ ಪರಿಸರ ಪ್ರಾಂತವನ್ನು ನವಿಲುಗರಿಯ ಹಿಡಿಸೂಡಿಯಿಂದ ಗುಡಿಸಿ ಗಂಧ ಬೆರೆತ ಹಿಮಾನಿಜಲವನ್ನು ಸಿಂಪಡಿಸಿ ಮುತ್ತಿನ ರಂಗವಲ್ಲಿ ಬರೆದು ಅಲಂಕರಿಸುತ್ತಿದ್ದಳು. ಬಂಗಾರದ ಸರಿಗೆಗಳಿಂದ ನೇಯಲ್ಪಟ್ಟು ಮುತ್ತು ರತ್ನಗಳನ್ನು ಹೊದಿಸಿದ ಬುಟ್ಟಿಯಲ್ಲಿ ಶಿವನಿಗೆ ಇಷ್ಟವಾದ ಫಲಪುಷ್ಪಗಳನ್ನೂ ಬಿಲ್ವ ಪತ್ರೆಗಳನ್ನೂ ಬಿಳೀ.




ಕಮಲಗಳನ್ನೂ ಸಂಗ್ರಹಿಸಿ ತಂದು ಅವನ ಬದಿಯಲ್ಲಿರಿಸುವಳು. ಬಂಗಾರದ ಕಮಂಡಲುವಿನಲ್ಲಿ ಹಿಮ ಶಿಖರಗಳಿಂದ ಜಾರುವ ಸ್ಫಟಿಕ ಜಲವನ್ನು ತುಂಬಿಸಿ ಜಪಮಾಲೆಯನ್ನು ಕಮಂಡಲುವಿನೊಂದಿಗೆ ಸೇರಿಸಿ ಇಟ್ಟಿರುವಳು. ಶಿವನನ್ನು ಆಕರ್ಷಿಸಲು ತಾನು ಬಗೆ ಬಗೆಯಾಗಿ ಅಲಂಕಾರ ಮಾಡಿಕೊಂಡು ಹೋಗುವಳು. ಕಿನ್ನರಿಯನ್ನು ಮೀಟುತ್ತ ಶಿವನಿಗೆ ಇಷ್ಟವಾದ ಭೈರವಿ, ಮುಖಾರಿ, ಕೇದಾರ, ಶಿವರಂಜನಿ ಮೊದಲಾದ ರಾಗಗಳನ್ನು ಹೊರಡಿಸುತ್ತ, ಸುತ್ತಲಿನ ವಾತಾವರಣವನ್ನು ಇಂಪಾದ ನಾದಗಳಿಂದ ತುಂಬಿಸುವಳು, ಶಿವನ ದೃಷ್ಟಿ ತನ್ನ ಮೇಲೆ ಬೀಳಬೇಕೆಂದು ಆಗಾಗ ಪ್ರಯತ್ನಿಸುವಳು. ಒಂದೊಂದು ದಿನ ಒಂದೊಂದು ಬಗೆಯ ಅಲಂಕಾರಗಳಿಂದ ಶಿವ ಸೇವೆಗೆ ಬರುವಳು, ಒಟ್ಟಿನ ಮೇಲೆ ಈ ಬಗೆಯ ಶಿವನ ಸಾನ್ನಿಧ್ಯವು ಅವಳಿಗೆ ತುಂಬಾ ಸಂತೋಷಪ್ರದವಾಗಿದ್ದಿತು.



ತಪೋನಿಷ್ಠೆಯಲ್ಲಿ ಮಗ್ನನಾಗಿದ್ದ ಶಿವನು ಒಂದು ಸಾರಿ ಕೂಡಾ ತನ್ನನ್ನು ನೋಡಲಾರನೇ? ಅವನ ತಣ್ಣಗಿನ ದೃಷ್ಟಿ ತನ್ನ ಮೇಲೆ ಒಂದುಸಾರಿ ಬೀಳ ಬಾರದೆ? ಹೀಗೆಂದುಕೊಂಡು ಬಹಳ ತಾಳ್ಮೆಯಿಂದ ಶಿವನ ಮುಂದೆಯೇ ಎಷ್ಟೋ ಹೊತ್ತಿನವರೆಗೆ ಸುಮ್ಮನೆ ಕುಳಿತು ಬಿಡುವಳು ಪಾರ್ವತಿ. ಕಡೆಕಡೆಗೆ ಶಿವನು ತನ್ನ ಕಡೆಗೆ ನೋಡುವುದೇ ಇಲ್ಲವೆಂದು ಅವಳಿಗೆ ನಿಸ್ಪೃಹೆ ಬರಲು ತೊಡಗಿತು. ಶಿವನ ದೃಢಮನಸ್ಸನ್ನು ಚಲಿಸುವಂತೆ ಮಾಡವುದೆಂದರೆ ಸಾಮಾನ್ಯ ಕೆಲಸವೇ ? ಆದಕ್ಕೆ ಮನ್ಮಥನ ಅಗತ್ಯವಿದೆ ಯೆಂದು ಇದನ್ನೆಲ್ಲಾ ನೋಡುತ್ತಿದ್ದ ದೇವೇಂದ್ರನಿಗೆ ಗೊತ್ತಾಯಿತು. ಅಂತೆಯೇ ದೇವೇಂದ್ರನು ಮನ್ಮಥ ನನ್ನು ಕರೆದು ಸಿಂಹಾಸನದ ಮೇಲೆ ಕೂಡಿಸಿ ಅವನನ್ನು ಶ್ಲಾಘಿಸುತ್ತಾ ಪೂಜಿಸಿ, ಅವನಿಂದ ಆಗಬೇಕಾದ ಕಾರ್ಯವನ್ನು ಹೇಳಿ ಕಳುಹಿಸಿಕೊಟ್ಟನು. ಮನ್ಮಥನು ಉತ್ಸಾಹದಿಂದ ಕಬ್ಬಿನ ಬಿಲ್ಲನ್ನೂ ಹೂಬಾಣಗಳು ತುಂಬಿದ ಬತ್ತಳಿಕೆಯನ್ನೂ ತೆಗೆದುಕೊಂಡು ರತೀ ದೇವಿಯೊಂದಿಗೆ, ಗಿಳಿಯ ರಥದ ಮೇಲೇರಿಕೊಂಡು ಈಶ್ವರನು ತಪಸ್ಸು ಮಾಡುತ್ತಿದ್ದ ಹಿಮಾಲಯ ಶಿಖರ ಗಳ ನಡುವಿನ ಕಣಿವೆಯೊಳಗೆ ಪ್ರವೇಶ ಮಾಡಿದನು.

ಮನ್ಮಥನ ಪ್ರವೇಶದಿಂದ ಆ ಕಣಿವೆಯೊಳಗೆ ಒಮ್ಮೆಗೇ ವಸಂತಋತು ವಿಕಸಿತವಾಯಿತು. ಅತ್ಯಂತ ರಮಣೀಯವಾದ ಆ ಪ್ರದೇಶದಲ್ಲಿ ಕೋಗಿಲೆಗಳ ಕುಹೂರವವೂ, ತುಂಬಿಗಳ ಝೇಂಕಾರವೂ ಹೊರಟುವು. ಪ್ರದೇಶವೆಲ್ಲಾ ಸುಗಂಧಮಯ ವಾಯಿತು, ರಸಮಯವಾಯಿತು.

ತನ್ನ ಸುತ್ತಮುತ್ತಲೂ ಏನೋ ಆಹ್ಲಾದದ ಗಾಳಿ ಮಂದವಾಗಿ ಬೀಸುವುದನ್ನು ತಿಳಿದು ಶಿವನು ಕಣ್ಣು ತೆರೆದು ನೋಡಿದನು. ಅಕಾಲ ವಸಂತಾಗಮನಕ್ಕೆ ಆಶ್ಚರ್ಯಪಡುತ್ತ ತನ್ನ ತಪಸ್ಸು ಇದರಿಂದ ಹಾಳಾದುದಕ್ಕೆ ಕೋಪಗೊಂಡನು ಶಿವ. ಅದೇ ಸಮಯಕ್ಕೆ ಪಾರ್ವತಿ ಜಪಮಾಲೆಯನ್ನೆತ್ತಿ ಶಿವನಿಗೆ ನೀಡುತ್ತಿರಲು, ಹೂಹೊದರಿನ ಹಿಂದಿನಿಂದ ಮನ್ಮಥನು ಶಿವನ ಹೃದಯಕ್ಕೆ ಗುರಿ ಹಿಡಿದು ನೀಲೋತ್ಪಲ ಬಾಣವನ್ನು ಪ್ರಯೋಗಿಸಿದನು. ಅದು ತಗಲಿದ ಕೂಡಲೇ ಶಿವನು ಮೆಟ್ಟಿಬಿದ್ದು ಕಣ್ಣು ಗಳನ್ನು ಅರಳಿಸಿದನು. ತನ್ನ ಮುಂದೆ ಕುಳಿತು ತನ್ನನ್ನೇ ನೋಡುವ ಪಾರ್ವತಿಯ ಮುಖ ಬಿಂಬವು ಶಿವನಿಗೆ ಅತ್ಯಂತ ಮನೋಹರವಾಗಿ ತೋರಿತು. ಒಂದು ಕ್ಷಣ ಬೆರಗಾದನು.

ಮರುಕ್ಷಣದಲ್ಲಿ ತನ್ನ ತಪೋಭಂಗಕ್ಕೆ ಶಿವನು ನಿಬ್ಬೆರಗಾಗಿ ಕೋಪಗೊಂಡು ತನ್ನ ಮೂರನೇ ಕಣ್ಣನ್ನು ತೆರೆದು ಮನ್ಮಥನನ್ನು ನೋಡಿದನು. ಶಿವನ ಫಾಲನೇತ್ರದ ಜ್ವಾಲಾದೃಷ್ಟಿಯೊಂದಿಗೆ ಎದ್ದಬೆಂಕಿ ಮನ್ಮಥನನ್ನು ಆ ಕ್ಷಣದಲ್ಲೇ ಭಸ್ಮ ಮಾಡಿಬಿಟ್ಟಿತು. ಶಿವನು ಧಿಗ್ಗನೆದ್ದು ಹಿಂದಿರುಗಿ ನೋಡದೆಯೇ ಚರ ಚರನೆ ತನ್ನ ಕೈಲಾಸ ಶಿಖರಕ್ಕೆ ಹೋಗಿಬಿಟ್ಟನು.

ಇದನ್ನೆಲ್ಲಾ ಹೊಂಚಿ ನೋಡುತ್ತಿದ್ದ ದೇವತೆಗಳು ಹೆದರಿಕೊಂಡು ಏನೂ ತೋರದಾದರು. ಮನ್ಮಥ ನೊಂದಿಗಿದ್ದ ರತೀದೇವಿಯಂತೂ ತನ್ನ ಪತಿಯ ಭಸ್ಮರಾಶಿಯ ಮೇಲೆ ಅಳುತ್ತಾ ಕುಳಿತಳು. ಶಿವನ ತಪಸ್ಸನ್ನು ಭಂಗಪಡಿಸಲು ತನ್ನ ಪತಿಯನ್ನು ಕಳು ಹಿಸಿದ ದೇವೇಂದ್ರನ ಮೇಲೆ ಶಾಪಹಾಕಿಕೊಂಡು ಅವಳು ರೋದಿಸುತ್ತಿರಲು, ದೇವತೆಗಳು ಓಡಿ ಹೋಗಿ ಈ ಸಮಾಚಾರವನ್ನು ಬ್ರಹ್ಮನಿಗೆ ತಿಳಿಸಿದರು. ಬ್ರಹ್ಮ ಇಂದ್ರು ಮೊದಲಾದ ದೇವತೆಗಳು ಅವಳ ಬಳಿಗೆ ಬಂದು ಪಾರ್ವತೀ ಶಂಕರರ ಕಲ್ಯಾಣವು ನಡೆಯುವಾಗ ಮನ್ಮಥನು ಮತ್ತೆ ಬದುಕಿಬರುವ ನೆಂದು ಅವಳಿಗೆ ಸಮಾಧಾನ ಹೇಳಿದರು. ಅದನ್ನು ನಂಬಿಕೊಂಡು ಅವಳು ಸಹಗಮನದ ಯೋಚನೆ ಬಿಟ್ಟು, ಆ ಭಸ್ಮ ರಾಶಿಯನ್ನು ಕಾಪಾಡಿಕೊಂಡು ಅಲ್ಲಿಯೇ ಕುಳಿತಳು.




ಶಿವನು ತನ್ನ ಪಾಡಿಗೆ ಹೊರಟು ಹೋದುದರಿಂದ ಪಾರ್ವತಿಗೆ ತನ್ನ ಸೌಂದರ್ಯದಲ್ಲಿ ನಂಬಿಗೆ ಹೋಯಿತು. ತನ್ನ ಶರೀರ ಲಾವಣ್ಯದ ಮೇಲೆ ಜಿಗುಪ್ಸೆ ಹುಟ್ಟಿತು, ಶಿವನನ್ನು ರಂಜಿಸಲು ತನ್ನಿಂದಾಗದೇ ಹೋದ ಮೇಲೆ ತನ್ನ ಶರೀರ ಸೌಂದರ್ಯವು ವ್ಯರ್ಥವೆನಿಸಿತು. ತಾನು ಕೂಡಾ ತಪಸ್ಸಿನಲ್ಲಿದ್ದು ಶಿವರಂಜನಿಯಾಗಬಹುದೋ ನೋಡೋಣವೆನಿಸಿತು. ಅವಳ ತಾಯಿ ಮೇನಕೆ ಎಷ್ಟು ಹೇಳಿದರೂ ಪಾರ್ವತಿ ಕೇಳಲಿಲ್ಲ. ಅವಳು ಕೆಲವು ಎಲೆಗಳನ್ನು ಮಾತ್ರವೇ ತಿನ್ನುತ್ತ ಶರೀರ ವನ್ನು ಕೃಶಗೊಳಿಸಿಕೊಳ್ಳುತ್ತ ತಪಸ್ಸಿಗೆ ಪ್ರಾರಂಭಿ ಸಿದಳು. ಜಯ, ವಿಜಯ ಎಂಬ ಇಬ್ಬರು ಅವಳ ಗೆಳತಿಯರು ಅವಳಿಗೆ ಜತೆಯಾಗಿರುತ್ತ, ಅವಳ ಯೋಗಕ್ಷೇಮಗಳನ್ನು ಮೇನಕಾ ಹಿಮವಂತರಿಗೆ ತಿಳಿಸುತ್ತ ಅಲ್ಲಿಯೇ ಇದ್ದರು. ಕೆಲವು ದಿನಗಳ ಮೇಲೆ ಪಾರ್ವತಿಯ ತಪೋನಿಷ್ಠೆ ತುಂಬಾ ಬಲ ವಾಯಿತು. ಪರ್ಣಗಳನ್ನು ಕೂಡಾ ತಿನ್ನುವುದನ್ನು ಬಿಟ್ಟಳು. ಆದುದರಿಂದ ಅವಳು "ಅಪರ್ಣಾ" ಎಂಬ ಹೆಸರನ್ನು ಪಡೆದಳು.

ಶಿವನು ಪ್ರಥಮಾವೇಶದಲ್ಲಿ ಮನ್ಮಥನನ್ನು ಭಸ್ಮ ಮಾಡಿದನೇ ಹೊರತು ಮನ್ಮಥನ ಬಾಣಗಳ ಪ್ರಭಾವವು ಸುಮ್ಮನೆ ಹೋಗಲಿಲ್ಲ. ಪಾರ್ವತಿಯ ತಪಸ್ಸು ಕೂಡಾ ಸಾರ್ಥಕವೇ ಆಯಿತು. ಶಿವನು ಒಂದು ಬಗೆಯ ಕುತೂಹಲದಿಂದ ಪಾರ್ವತಿಯನ್ನು ನೆನೆಯ ತೊಡಗಿದನು. ಅವಳು ತಪಸ್ಸಿನಲ್ಲಿರುವ ಸಂಗತಿ ತಿಳಿದು, ವೇಷ ಬದಲಾಯಿಸಿಕೊಂಡು ಪಾರ್ವತಿಯ ಬಳಿಗೆ ಬಂದನು. ಪಾರ್ವತಿಯ ಮನಸ್ಸು ಹೇಗೆಂದು ಪರೀಕ್ಷಿಸಲು ತೊಡಗಿದನು. ಅವಳನ್ನು ಮನಸಾರೆ ಮೆಚ್ಚಿಕೊಳ್ಳುತ್ತ ಮದುವೆಯಾಗುವುದೇ ಸರಿಯೆಂಬ ನಿಶ್ಚಯಕ್ಕೆ ಬಂದನು.

ಆಮೇಲೆ ಶಿವನು ಸಪ್ತರ್ಷಿಗಳನ್ನು ಕರೆದು ಹಿಮವಂತನ ಕಡೆಗೆ ಮದುವೆಯ ರಾಯಭಾರ




ನಡೆಸಲು ಹೇಳಿದನು. ಶಿವನಂಥ ಮಹಾದೇವನಿಗೆ ಕನ್ಯಾದಾತನಾಗುವ ಭಾಗ್ಯ ಬಂದುದನ್ನರಿತು ಹಿಮವಂತನು ಸಂತೋಷಾತಿಯದಿಂದ ತನ್ನ ಶಿಖರಗಳನ್ನು ಇನ್ನಿಷ್ಟು ಏರಿಸಿಕೊಂಡನು. ಬೇಗದಲ್ಲೇ ವಿವಾಹಕ್ಕೆ ಋಷಿಗಳು ಮುಹೂರ್ತವಿಟ್ಟರು.

ಶಿವನು ಮದುಮಗನಾಗಿ ಪ್ರಮಥ ಗಣಗಳನ್ನು ಮುಂದಿಟ್ಟುಕೊಂಡು ಹಿಮವಂತನ ಮನೆಗೆ ಹೋದನು. ಹಿಮಾಲಯ ಪರ್ವತ ಶಿಖರಗಳೇ ಮದುವೆ ಚಪ್ಪರಕ್ಕೆ ಸ್ತಂಭಗಳಾದುವು. ಬ್ರಹ್ಮ, ವಿಷ್ಣು, ದೇವೇಂದ್ರ ಮೊದಲಾದ ದೇವತೆಗಳೂ, ಸಪ್ತರ್ಷಿಗಳನ್ನನುಸರಿಸಿ ಸಾವಿರಾರು ಋಷಿಗಳೂ, ನಾರದಾದಿ ಮುನಿಪುಂಗವರೂ ಹಿಮಾಲಯದ ವಿವಾಹ ಮಂಟಪವನ್ನು ಅಲಂಕರಿಸಿದರು. ಎಲ್ಲೆಲ್ಲಿಯೂ ಸಂಭ್ರಮವೇ ಸಂಭ್ರಮ.

ಹಿರಿಯ ಮುತ್ತೈದೆಯಾದ ಅರುಂಧತಿ ಶಿವನ ಫಾಲನೇತ್ರದ ರೆಪ್ಪೆಯ ಮೇಲೆ ಕಲ್ಯಾಣ ತಿಲಕವನ್ನು ಉದ್ದಕ್ಕೆ ತಿದ್ದಿದಳು. ಅತ್ಯಾಕರ್ಷಕವಾದ ಮದುಮಗನ ಅಲಂಕಾರದಲ್ಲಿ ಶಿವನು ಪರಮ ಸುಂದರನಾಗಿ ಕಂಡನು. ಎಲ್ಲರೂ ಆವನನ್ನು ಸುಂದರೇಶ್ವರನೆಂದು ಕರೆದರು.

ಸರ್ವಾಲಂಕಾರಗಳಿಂದ ಶೋಭಿತೆಯಾಗಿ ಬೆಳಗುವ ಮದುಮಗಳು ಪಾರ್ವತಿಯನ್ನು ವಿಷ್ಣು ಕರೆದುಕೊಂಡು ಬಂದು ಶಿವನೊಂದಿಗೆ, "ನೀನು ಸುಂದರೇಶ್ವರನಾದರೆ, ನನ್ನ ತಂಗಿ ಮೀನಾಕ್ಷೀ ದೇವಿಯಾಗಿದ್ದಾಳೆ" ಎನ್ನುತ್ತ ಪಾರ್ವತಿಯ ಬಲಗೈಯನ್ನು ಶಿವನ ಬಲಗೈಯಲ್ಲಿ ಇರಿಸಿ, ಇಬ್ಬರನ್ನೂ ಮದುವೆಯ ಹಸೆಗಳಲ್ಲಿ ಕೂಡಿಸಿದನು. ವಿಧ್ಯುಕ್ತ ಕಾರ್ಯಗಳು ನಡೆದುವು.

ಶಿವ ಪಾರ್ವತಿಯರ ವಿವಾಹ ಮಹೋತ್ಸವವು ಮಹಾ ವೈಭವದಿಂದ ನೆರವೇರಿತು.

ಹಿಮಾಲಯದಲ್ಲಿ ಶಿವ ಪಾರ್ವತಿಯರು ತಪಸ್ಸು ಮಾಡಿದ ಪ್ರದೇಶದಲ್ಲೇ ದೇವಶಿಲ್ಪಿ ವಿಶ್ವಕರ್ಮನು ನವದಂಪತಿಗಳಾದ ಪಾರ್ವತೀ ಪರಮೇಶ್ವರರಿಗೆ ದಿವ್ಯವಾದ ಅಂತಃಪುರ ಮಂದಿರವನ್ನು ನಿರ್ಮಿಸಿ ಕೊಟ್ಟನು.

ಮಂಗಳ ವಾದ್ಯಗಳು ಅಂಬರವನ್ನಡರುತ್ತಿರಲು ದೇವತೆಗಳು ಪುಷ್ಪವೃಷ್ಟಿ ಸುರಿಸುತ್ತಿರಲು, ಶಿವನು ಪಾರ್ವತಿಯ ಕೈ ಹಿಡಿದುಕೊಂಡು ಎಲ್ಲರ ಮಧ್ಯದಲ್ಲಿ ನಡೆಯುತ್ತಾ ಮಂದಿರದ ಕಡೆಗೆ ಹೊರಟರು. ಮಂದಿರಕ್ಕೆ ಹೋಗುವ ದಾರಿಯಲ್ಲಿಯೇ ಮನ್ಮಥನ ಭಸ್ಮರಾಶಿ ಇದ್ದಿತು.

ಆ ಬೂದಿಯ ರಾಶಿಯನ್ನು ಅಂಟಿಕೊಂಡು ರತೀದೇವಿ ದುಃಖಾರ್ತಳಾಗಿ ಶುಭಕಾಲ ನಿರೀಕ್ಷೆ ಮಾಡುತ್ತ ಕುಳಿತಿದ್ದಳು.

ಪತಿ ಭಿಕ್ಷೆ ಬೇಡುವವಳಾಗಿ ಕುಳಿತಿರುವ ರತಿಯ ಬಳಿಗೆ ಶಿವ ಪಾರ್ವತಿಯರು ಹೋಗಿ, "ದೀರ್ಘ ಸುಮಂಗಲಿಯಾಗಿರು" ಎಂದು ಅವಳನ್ನು ಹರ

ಸಿದರು. ಶಿವನು ಪುನಃ ತನ್ನ ಮೂರನೇ ಕಣ್ಣನ್ನು ತೆರೆದು ತಣ್ಣಗಿನ ಬೆಳುದಿಂಗಳ ಕಾಂತಿಯನ್ನು ಬೀರಲು, ಭಸ್ಮರಾಶಿ ಮಾಯವಾಗಿ ಮನ್ಮಥನು ನಿಜರೂಪದಿಂದ ಎದ್ದು, ಕಬ್ಬಿನ ಬಿಲ್ಲನ್ನು ಝುಮ್ಮೆನ್ನಿಸಿ ಒಮ್ಮೆ ಎಲ್ಲರ ಕಣ್ಣಿಗೂ ಕಂಡು ಕೂಡಲೇ ಮಾಯ ವಾಗಿ ಹೋದನು.

ಆಗ ಶಿವನು ರತೀ ದೇವಿಯೊಂದಿಗೆ "ಸುಭಗೇ! ನಿನ್ನ ಪತಿಯ ಶಕ್ತಿ ಅಪಾರ. ಕಣ್ಣೆದಿರು ಕಾಣುವವ ನಾಗಿದ್ದರೆ ಲೋಕವು ತಾಳುವಂತಿಲ್ಲ. ಅಂತಲೇ ಅವನು ಲೋಗರ ದೃಷ್ಟಿಗೆ ಅನಂಗನೆನಿಸಿ ಅದೃಶ್ಯ ನಾಗಿರುವುದೇ ಒಳ್ಳೆಯದು. ನಿನಗೆ ಸದಾ ಕಾಣುವವ ನಾಗಿರುವನು. ನಿಮಗಿಬ್ಬರಿಗೂ ನಿತ್ಯ ಮಂಗಳ ವಾಗಿರಲಿ" ಎಂದು ಹರಸಿದನು. ರತಿಯು ಸಂತೋಷದಿಂದ ಅದೃಶ್ಯಳಾಗಿ ಅನಂಗನೊಂದಿಗೆ ಸೇರಿದಳು.

ಪಾರ್ವತೀ ಪರಮೇಶ್ವರರು ಅಂತಃಪುರವನ್ನು ಪ್ರವೇಶಿಸಿದರು. ಅರುಂಧತಿ ನೂತನ ದಂಪತಿಗಳಿಗೆ ಓಕುಳಿ ಸುತ್ತಿ ದೃಷ್ಟಿ ತೆಗೆದಳು. ಕರ್ಪೂರಾರತಿ ಬೆಳಗಿದಳು. ಆಗ ವಿಶ್ವಕರ್ಮನು ನಿಲುವೆತ್ತರದ, ಒಂದು ಫಲಕವನ್ನು ನವದಂಪತಿಗಳ ಇದಿರಿನಲ್ಲಿ ನಿಲ್ಲಿಸಿಟ್ಟು "ಇದೊಂದು ದೊಡ್ಡ ಅಪೂರ್ವ ಚಿತ್ರ ಪಟ. ಈ ಚಿತ್ರದಲ್ಲಿ ಇಬ್ಬರ ಚಿತ್ರಗಳಿವೆ. ಅವರಲ್ಲಿ ಯಾರ ಸೌಂದರ್ಯ ಹೆಚ್ಚೆಂದು ನಮಗೆ ಗೊತ್ತಾಗುವು ದಿಲ್ಲ. ಅದನ್ನು ಹೇಳುವವರು ನೀವಿಬ್ಬರೇ ಎಂಬ ನಂಬುಗೆಯಲ್ಲಿ ನಿಮ್ಮ ಮುಂದೆ ಇರಿಸಿದ್ದೇನೆ. ಹೇಳಿರಿ" ಎಂದು ಅದರ ತೆರೆಯನ್ನು ತೊಲಗಿಸಿದರು.

ಅದೊಂದು ನಿಲ್ಲುಗನ್ನಡಿ. ಅದರಲ್ಲಿ ತಮ್ಮ ಪ್ರತಿ ಬಿಂಬಗಳನ್ನು ನೋಡಿ ಶಿವಪಾರ್ವತಿಯರು ಪರಸ್ಪರ ನೋಡಿಕೊಂಡು ಮುಗುಳು ನಕ್ಕರು. "ಈ ಮುಗುಳು ನಗು ಉತ್ತರವಲ್ಲ. ಬಾಯಿ ತೆರೆದು ಕೇಳಿಸುವಂತೆ ಹೇಳಬೇಕು" ಎಂದನು ನಾರದ,



ಶಿವನು ಕಿರುನಗೆಯೊಂದಿಗೆ ಪಾರ್ವತಿಯನ್ನು ನೋಡುತ್ತ, "ಜಗ ಜಗ ಹೊಳೆಯುವ ಮೂಗುತಿಯ ಚಿತ್ರಾಂಗಿಯ ಸೌಂದರ್ಯವೇ ಹೆಚ್ಚು!" ಎಂದನು.

ನಾಚಿಕೆಯಿಂದ ಕೆಂಪೇರಿದ ಗಲ್ಲಗಳಿಂದ ಪಾರ್ವತಿ ಮೆಲ್ಲನಿಯಿಂದ "ಈ ಮೂಗಣ್ಣನ ಪುರುಷನ ಸೌಂದರ್ಯಕ್ಕೆ ಮೂರು ಲೋಕದಲ್ಲೂ ಸಾಟಿ ನಾ ಕಾಣೆನಪ್ಪ" ಎಂದಳು.

ಎಲ್ಲರೂ ಪಾರ್ವತೀ ಪರಮೇಶ್ವರರ ಮೇಲೆ ಪುಷ್ಪಾರ್ಚನೆ ಮಾಡಿ ಹೊರಟು ಹೋದರು. ದಂಪತಿಗಳಿಬ್ಬರೂ ಮೆತ್ತಗಿನ ತೂಗುಯ್ಯಾಲೆಯಲ್ಲಿ ಹೋಗಿ ಕುಳಿತರು.

ಅವರ ಇದಿರಿನ ಗೋಡೆಯ ಮೇಲೆ ಮನೋಹರ ವಾದ ಚಿತ್ರವೊಂದಿದ್ದಿತು. ಚಿತ್ರದ ಮಧ್ಯದಲ್ಲಿ ಅಂದ ವಾದ ಆನೆಗಳ ಜತೆಯೊಂದು ನಾಟ್ಯವಾಡುತ್ತಿರು ವಂತೆ ಮುಂಗಾಲುಗಳನ್ನೆತ್ತಿ ಇದಿರಿದಿರಾಗಿ ಸೊಂಡಿಲು ಗಳನ್ನು ಒಂದರೊಡನೊಂದು ಬಳಸಿಕೊಂಡಂತಿದ್ದುವು.

ಅದನ್ನು ನೋಡುತ್ತಿದ್ದ ಪಾರ್ವತಿಗೆ ಬ್ರಹ್ಮನಿಗೆ ಜ್ಞಾನ ಬೋಧೆ ಮಾಡಿದ ಬಾಲ ವಿಘ್ನೇಶ್ವರನ ನೆನಪಾಯಿತು.

ತೋರಣ ಕಟ್ಟಿದಂತಿರುವ ಆ ಎರಡು ಆನೆಗಳ ಮಧ್ಯದಲ್ಲಿ ಕಾಣುವ ಸರೋವರದ ನಡುವಿನಲ್ಲಿ ದೊಡ್ಡದೊಂದು ಪದ್ಮವು ಅರಳಿಕೊಂಡಿದ್ದಿತು. ಆ ಚಿತ್ರದಲ್ಲಿರುವ ಆನೆಗಳ ಜೋಡಿಯ ಮೇಲೆ ಶಿವ ಪಾರ್ವತಿಯರ ದೃಷ್ಟಿಗಳು ನಿಂತುವು. ಆಗ ಆ ಪದ್ಮ ಚಿತ್ರವಿರುವಲ್ಲಿ ಬೆಳುದಿಂಗಳ ಪ್ರಕಾಶವು ಬೆಳಗ ತೊಡಗಿ ಕ್ರಮವಾಗಿ ದೊಡ್ಡದಾಯಿತು. ಆ ಬೆಳಕಿನಲ್ಲಿ ಶಶಿವರ್ಣದಿಂದ ಹೊಳೆಯುವ ವಿಘ್ನೇಶ್ವರನ ದರ್ಶನ ಅವರಿಗಾಯಿತು.

ವಿಘ್ನೇಶ್ವರನ ಮುಖವು ಆನೆಯದೇ ಆಗಿದ್ದರೂ ಆ ಮುಖದಲ್ಲಿ ದಿವ್ಯತ್ವ ಸೂಸುತ್ತಿತ್ತು. ಪ್ರಸನ್ನತೆ ತುಂಬಿತ್ತು. ಅವನ ದೃಷ್ಟಿಗಳು ಶಾಂತವಾಗಿ ಮೇಧಸ್ಸನ್ನೂ ಶಕ್ತಿಯನ್ನೂ ಕೊಡುವಂತಿದ್ದುವು. ಅವನ ಹೊಟ್ಟೆ ದೊಡ್ಡದಾಗಿ ಹೊಳೆಯುತ್ತಿತ್ತು. ಅಭಯ ಹಸ್ತನಾಗಿ ಶೋಭಿಸುವ ವಿಘ್ನೇಶ್ವರನು ಪಾರ್ವತಿಗೆ ಮುದ್ದಿನ ಮೂಟೆಯಂತೆ ಕಂಡನು.

ಅವನನ್ನು ನೋಡುತಿದ್ದಂತೆ ಪಾರ್ವತೀ ಪರಮೇಶ್ವರರಿಗೆ ತಮ್ಮಲ್ಲಿ ಏನೋ ಅನಿರ್ವಚನೀಯವಾದ ಆನಂದ ಉಕ್ಕುವಂತೆ ತೋರಿತು. ಆನಂದದ ಪಾರವಶ್ಯತೆಯಿಂದ ಯಾವ ಮಾತೂ ಆಡಲಾಗದೆ ವಿಘ್ನೇಶ್ವರನ ಮೂರ್ತಿಯನ್ನು ರೆಪ್ಪೆಬಡಿಯದೆ ನೋಡುತ್ತಿದ್ದರು. ವಿಘ್ನೇಶ್ವರನು ಎಡಬದಿಗೆ ಸುರುಳಿ ಕೊಂಡಿರುವ ತನ್ನ ಚಿಕ್ಕ ಎಳೆ ಸೊಂಡಿಲನ್ನು ತಡವುತ್ತ ಮುದ್ದು ಮಾತುಗಳಿಂದ, "ನಾನು ವಿಘ್ನೇಶ್ವರ. ವಿಘ್ನಗಳನ್ನು ತೊಲಗಿಸುವ ವಿನಾಯಕ. ಪಂಚಭೂತಗಣಗಳಿಗೆ ಅಧಿಪತಿ. ಗಣಪತಿ. ಚಿತ್ರವಿಚಿತ್ರ ರೂಪಿಯಾದ ಚಿತ್ರಗಣಪತಿ. ನಿಮ್ಮಿಬ್ಬರ ಸಮಾಗಮ ನಿರ್ವಿಘ್ನವಾಗಿ ಫಲಿಸಲಿ! ಅನುರಾಗದ ಫಲಿತವಾಗಿ ಶಿವನ ತೇಜಸ್ಸಿನಿಂದ ಕುಮಾರಸ್ವಾಮಿ ಹುಟ್ಟಿ ತಾರಕಾಸುರನನ್ನು ಅಂತ್ಯಗೊಳಿಸುತ್ತಾನೆ. ಕುಮಾರಸ್ವಾಮಿಗಿಂತ ಮೊದಲು ನಾನು ನಿಮ್ಮ ಪುತ್ರನಾಗಿ ಅವತರಿಸುತ್ತೇನೆ!" ಎಂದನು, ಆಗ ಪಾರ್ವತಿ ಅವನನ್ನು ಎತ್ತಿಕೊಳ್ಳಲು ಕೈ ಚಾಚಿದಳು. ವಿಘ್ನೇಶ್ವರನು ಆ ಪ್ರಕಾಶದೊಂದಿಗೇ ಅಂತರ್ಧಾನನಾದನು.

ಅದುವರೆಗೆ ಕಂಡುದೆಲ್ಲಾ ಕನಸೋ ನಿಜವೋ ಎಂದು ಪಾರ್ವತೀ ಪರಮೇಶ್ವರರು ಪ್ರಶ್ನಾರ್ಥಕವಾಗಿ ಪರಸ್ಪರ ನೋಡಿಕೊಂಡರು. ಆ ನೋಡಿಕೊಳ್ಳುವ ಆನಂದದಲ್ಲೇ ತನ್ಮಯರಾಗಿ ಈವೊದಲಿನದೆಲ್ಲವನ್ನೂ ಮರೆತರು.

ಶಿವಪಾರ್ವತಿಯರು ಆ ಮಂದಿರದಲ್ಲಿ ಆನಂದ ಸಾಗರದಲ್ಲಿ ತೇಲಾಡಿಕೊಂಡಿರಲು, ಜಗತ್ತಿಗೆ ಮಹಾ ಮಹಾ ಉಪದ್ರಗಳು ಕವಿದುಕೊಂಡು ಬಂದುವು.





# ಬಾವನಭಂಗ

ಒಂದು ಗ್ರಾಮದಲ್ಲಿ ಸುಬ್ಬಣ್ಣನೆಂಬವನು ಜೀನಸಿನಂಗಡಿ ಇಟ್ಟುಕೊಂಡು ವ್ಯಾಪಾರ ಮಾಡುತ್ತಿದ್ದ. ಒಂದು ದಿನ ಅವನು ಅಂಗಡಿ ಮುಚ್ಚಿ ಮನೆಗೆ ಬಂದಾಗ, ಚಾವಡಿಯ ಬದಿಯಲ್ಲಿದ್ದ ಪೆಟ್ಟಿಗೆಯನ್ನು ನೋಡಿ, ಹುಬ್ಬುಗಂಟು ಹಾಕಿಕೊಂಡು ಅದನ್ನೇ ನೋಡುತ್ತ ಏನೋ ಗುಣುಗುಣಿಸಿಕೊಂಡನು. ಬಳಿಕ ಸಿಟ್ಟಿನಿಂದ ಒಳಗಿರುವ ಹೆಂಡತಿ ಪಾರ್ವತಿಗೆ ಕೇಳುವಂತೆ, "ಮತ್ತೆ ಯಾರೋ ಬಂದಹಾಗಿದೆಯಲ್ಲೇ, ಹೊಟ್ಟೆ ಬಿರೀವ ಹಾಗೆ ತಿಂದು ತೇಗಿ ಹೋಗಲಿಕ್ಕೆ!" ಎಂದು ಕೇಳಿದನು.

ಪಾರ್ವತಿ ಅವಸರದಿಂದ ಅವನ ಮುಂದೆ ಬಂದು "ಮೆಲ್ಲಗೆ ಮಾತಾಡೀಂದ್ರೆ! ನನ್ನನ್ನು ನೋಡಬೇಕಂತ ನನ್ನ ತಂಗಿ ಬಂದಳು ಅಷ್ಟೇ. ನಿಮ್ಮ ಹೊಲಸು ಮಾತು ಅವಳ ಕಿವೀಗೆ ಬಿದ್ದರೆ ಏನಂದುಕೊಂಡಾಳು! ಬಚ್ಚಲಿನಲ್ಲಿ ಸ್ನಾನಮಾಡ್ತಾಳೆ!" ಎಂದಳು.

ಸುಬ್ಬಣ್ಣ ಗೊಳ್ಳನೆ ನಕ್ಕು "ಒಹೊ! ನಿನ್ನಂಥ ಕುರೂಪಿ ಅಕ್ಕನ ಅಂದಚಂದಗಳನ್ನು ನೋಡಬೇಕೂ ಅಂತ ಓಡಿ ಬರುವವರೂ ಇದ್ದಾರಂತ ಆಯಿತು! ಭೇಷ್!" ಎಂದನು.

ಪಾರ್ವತಿಗೆ ಸೂಜಿಯಿಂದ ತಿವಿದ ಹಾಗೆ ಮನಸ್ಸಿನೊಳಗೆ ನೋವಾಯಿತು. ಧಂಡಿಯಾಗಿ ವರದಕ್ಷಿಣೆ ತೆಗೆದುಕೊಂಡು ಸುಬ್ಬಣ್ಣ ಅವಳನ್ನು ಮದುವೆಯಾಗಿದ್ದ. ಮದುವೆಯಾದಂದಿನಿಂದಲೂ ಹೆಂಡತಿಯನ್ನು ಕುರೂಪಿಯೆಂದೂ, ಅನಾಕಾರಿಯೆಂದೂ ಬೆರಳೆತ್ತಿ ತೋರಿಸುತ್ತ ಅವಳ ಮನಸ್ಸನ್ನು ಗಾಯಪಡಿಸಿಕೊಂಡೇ ಇದ್ದನು. ಸ್ವತಃ ಸಾಧುವಾದ ಪಾರ್ವತಿ ಆ ನೋವನ್ನು ತನ್ನೊಳಗೇ ಅಡಗಿಸಿಕೊಂಡಿದ್ದಳು. ತಾಳ್ಮೆಯ ತವರುಮನೆಯಂತೆ ಸ್ವಲ್ಪ ಸಹಾ ಮುನಿಸು ತೋರಿಸಿದವಳಲ್ಲ.

ಅವಳು ಗಂಡನಿಗೆ ಕುಡಿಯಲು ನೀರು ತಂದಿಟ್ಟು, "ನಾಳೆ ಸಾಧಾರಣದ್ದಾದರೂ ಸಾಕು, ಒಂದು ಸೀರೆ ಕೊಂಡುಕೊಂಡು ತನ್ನಿ" ಎಂದಳು.

"ಹೊಸ ಸೀರೆಯೊ? ಏಕೆ?" ಎಂದು ಆಶ್ಚರ್ಯದಿಂದ ಕೇಳಿದ ಸುಬ್ಬಣ್ಣ.

"ನನಗೋಸ್ಕರ ಅಲ್ಲಾಂದ್ರೆ. ನನ್ನತಂಗಿಗಾಗಿ. ಅಪರೂಪಕ್ಕೆ ಬಂದಿದಾಳಲ್ಲಾ?" ಎಂದಳು ಪಾರ್ವತಿ.

"ಬೇಷ್! ಬೇಷ್! ಇನ್ನೂ ಚೆನ್ನಾಗಿದೆ! ನಿನ್ನ ಬಳಗದವರು ಯಾರು ಬಂದರೂ ಸೀರೇ ರವಿಕೇ

ಎಂ. ಕೆ. ಈಶ್ವರರಾವ್



ಕೊಡಲೇಬೇಕು ಅಂತ ಮೊದಲೇ ನಿಬಂಧನೆ ಹಾಕಿರ್ತಿದ್ರೆ ನಿನ್ನ ಅಪ್ಪನ ಕೈಯಿಂದ ಇನ್ನಿಷ್ಟು ವರದಕ್ಷಿಣೆ ಎಳೆದುಕೊಳ್ಳುತ್ತಿದ್ದೆ. ಅವರೇನು ಬಾಚಿ ಕೊಟ್ಟಿದ್ದಾರೆಯೆ?" ಎಂದ ಸುಬ್ಬಣ್ಣ ನಿರ್ದಾಕ್ಷಿಣ್ಯವಾಗಿ.

ಅಷ್ಟರಲ್ಲಿ ಪಾರ್ವತಿಯ ತಂಗಿ ಲಕ್ಷ್ಮಿ ಸ್ನಾನ ಮುಗಿಸಿ ಅಲ್ಲಿಗೆ ಬಂದುದನ್ನು ನೋಡಿ, ಸುಬ್ಬಣ್ಣ ನಗುತ್ತ, "ಓಹೊಹೊ! ಎಷ್ಟುಕಾಲವಾಯಿತು ನಿನ್ನ ನೋಡಿ! ಅಕ್ಕನನ್ನು ಪೂರ್ತಿ ಮರೆತೇಬಿಟ್ಟೆ ಅಂತ ಮಾಡಿದೆ!" ಎಂದನು.

"ಎಲ್ಲಿ ಬಾವಾ? ಓದು ಕಲಿಯುವುದರಲ್ಲೇ ಹೊತ್ತು ಹೋಗುತ್ತೆ. ಈಗ ರಜೇ ಅಂತ ಬಂದು ಬಿಟ್ಟೆ. ಅಕ್ಕನನ್ನು ಮರೆತರೂ ನಿಮ್ಮನ್ನು ಮರೆಯಲು ಸಾಧ್ಯವೇ? ನಿಮ್ಮ ವೀರ ಧೀರ ಪ್ರತಾಪ ಸಾಮಾನ್ಯವೇ?" ಎಂದಳು ಲಕ್ಷ್ಮಿ ನಗುತ್ತ.

"ಅದು ನಿಜವೇ ಅನ್ನು! ಈ ಸಮಯದಲ್ಲಿ ಒಬ್ಬಳೇ ಬಂದೆಯಲ್ಲಾ! ಕಾಲ ತುಂಬಾ ಕೆಟ್ಟಿದೆ. ಊರೆಲ್ಲಾ ಕಳ್ಳರ ಭಯ! ಎಲ್ಲರೂ ಹೆದರಿಕೊಂಡಿದ್ದಾರೆ. ಸ್ವಲ್ಪ ಆಲೋಚನೆಮಾಡಿ ಹೊರಡಬೇಕಮ್ಮಾ! ದಾರಿಯಲ್ಲಿ ನಿನಗೇನಾದರೂ ಆಗಿದ್ದರೆ ಎಷ್ಟು ಕಷ್ಟ!" ಎಂದನು ಸುಬ್ಬಣ್ಣ.

"ಹಾಗೆ ಯಾರಾದರೂ ನನ್ನನ್ನು ಅಡ್ಡಗಟ್ಟಿದ್ದರೆ ನಿಮ್ಮ ಹೆಸರು ಹೇಳುತ್ತಿದ್ದೆ. ಅವರು ಹೆದರಿ ನನ್ನ ಕಾಲು ಹಿಡಿದು ಕ್ಷಮೆಕೇಳುತ್ತಿದ್ದರು." ಎಂದು ಲಕ್ಷ್ಮಿ ಗಲಗಲನೆ ನಕ್ಕಳು.

ಮದುವೆಯ ಸಮಯದಲ್ಲಿ ಸುಬ್ಬಣ್ಣನು ತನ್ನ ಧೈರ್ಯ ಸಾಹಸಗಳನ್ನು ಕುರಿತು ಸತ್ಯವಂತೆ ಕಾಣುವ ಎಷ್ಟೋ ಕಲ್ಪಿತ ಕಥೆಗಳನ್ನು ಹೇಳಿ ಹೆಣ್ಣಿನ ಮನೆಯವರನ್ನೆಲ್ಲ ದಂಗು ಗೊಳಿಸಿದ್ದ. ಲಕ್ಷ್ಮಿ ಅದಾವುದನ್ನೂ ಮರೆಯಲಿಲ್ಲ.

"ಅದು ಹೌದೂನ್ನು! ನಿನಗೆ ಅಷ್ಟು ಧೈರ್ಯ ಬರಬೇಕಲ್ಲ?" ಎಂದು ಸುಬ್ಬಣ್ಣ ಹಲ್ಲುಬಿಟ್ಟು ಇನ್ನಿಷ್ಟುನಕ್ಕ.

ಆ ಸಮಯದಲ್ಲಿ ರಂಗಣ್ಣನೆಂಬವನು ಅಕಸ್ಮಾತ್ತಾಗಿ ಬಂದು ಸುಬ್ಬಣ್ಣನಿಗೆ ನೂರು ರೂಪಾಯಿ ತುಂಬಿದ ಒಂದು ಚೀಲವನ್ನು ಕೊಟ್ಟನು. ಅವನು ಎರಡು ವರ್ಷಗಳ ಹಿಂದೆ ಸುಬ್ಬಣ್ಣನ ಹತ್ತಿರ ಸಾಲವಮಾಡಿ, ಅದನ್ನು ತೀರಿಸದೆ ಊರು ಬಿಟ್ಟು ಓಡಿ ಹೋಗಿದ್ದನು. ಮೋಸಮಾಡುವ ಮನಸ್ಸು ಇಲ್ಲದಿದ್ದರೂ, ಹಣ ವಿಲ್ಲದ್ದರಿಂದಲೇ ಹಾಗೆ ಓಡಿದ್ದನು. ಇತ್ತೀಚೆಗೆ ಪಟ್ಟಣದಲ್ಲಿ ಉದ್ಯೋಗ ಸಂಪಾದಿಸಿಕೊಂಡು, ಹಣಸೇರಿಸಿ ಆಕಸ್ಮಿಕವಾಗಿ ಹೀಗೆ ಬಂದು ಹಳೆಯ ಸಾಲವನ್ನು ತೀರಿಸಿ, ತಡವಾದುದಕ್ಕೆ ಕ್ಷಮೆ ಕೇಳಿದನು.

ಅವನನ್ನು ಕಳುಹಿಸಿದ ಮೇಲೆ ಸುಬ್ಬಣ್ಣನು ಹೆಂಡತಿಯನ್ನು ಕರೆದು, ಹಣದ ಚೀಲವನ್ನು ಅವಳಿಗೆ ಕೊಟ್ಟು ಕಬ್ಬಿಣದ ಪೆಟ್ಟಿಗೆಯಲ್ಲಿಡುವಂತೆ ಹೇಳಿದನು. ಪಾರ್ವತಿ ಗಂಡನನ್ನು ಸನ್ನೆಯಿಂದ

ಒಳಗೆ ಕರೆದು, "ಕೈ ಬಿಟ್ಟು ಹೋಯಿತು ಅಂದು ಕೊಂಡ ಹಣ ಬಂತಲ್ಲವೆ? ಸ್ವಲ್ಪ ದೊಡ್ಡ ಮನಸ್ಸು ಮಾಡಿ ಒಂದು ಸೀರೆ ತಂದು ಬಿಡೀಂದ್ರೆ" ಎಂದು ದೈನ್ಯದಿಂದ ಕೇಳಿಕೊಂಡಳು.

"ಚೆನ್ನಾಗಿದೆ ನಿನ್ಮಾತು! ಪೆಟ್ಟಿಗೆ ಮುಚ್ಚು! ಆ ಸುದ್ದಿ ತೆಗೀಬೇಡ" ಎಂದು ಸುಬ್ಬಣ್ಣ ತಿರಸ್ಕಾರ ದಿಂದ ರೇಗಿದ.

ಪಾರ್ವತಿ ಮತ್ತೇನೂ ಮಾತಾಡಲಿಲ್ಲ. ಆಮೇಲೆ ಮೂವರೂ ಊಟ ಮುಗಿಸಿದರು.

"ಈ ದಿನ ನೀರೆಲ್ಲಾ ಖರ್ಚಾಗಿ ಹೋಯಿತು. ಎಂಜಲು ತಟ್ಟೆಗಳನ್ನು ಅಡಿಗೇ ಮನೇ ಮೂಲೇಲೇ ಇಡಬೇಕು. ಬೆಳಗಾದ ಮೇಲೆ ನೀರು ಸೇದಿ ತೊಳೆಯ ಬೇಕಾಯ್ತು." ಎಂದಳು ಪಾರ್ವತಿ ತಂಗಿಯೊಂದಿಗೆ.

"ಅದೇಕೆ ಅಕ್ಕಾ, ಅಡಿಗೇ ಮನೇಲಿ ಎಂಜಲು ತಟ್ಟೆ ಇಡೋದೇ? ಹೊರಗೇ ಇಟ್ಟರೆ ಬಾವ ಗಟ್ಟಿ ಕಾವಲಾಗಿ ಮಲಗಿರ್ತಾರೆ. ನನಗೆ ನಿನ್ನ ಹತ್ರ ತುಂಬಾ ಮಾತಾಡಲಿಕ್ಕಿದೆ. ಬಾವ ಹೊರಗೆ ಮಂಚ ಹಾಕಿ ಮಲಗಿಕೊಂಡ್ರೆ ಯಾವ ಕಳ್ಳನಿಗೆ ಕದ್ದು ಕೊಳ್ಳುವ ಧೈರ್ಯಬಂದೀತು? ಅಲ್ಲವೇ ಬಾವಾ? ಒಂದು ದಿನ ಹೊರಗೆ ಕಾವಲಾಗಿ ಮಲಗಲಾರಿರಾ?" ಎಂದಳು ಲಕ್ಷ್ಮಿ.

"ಸರಿ ಸರಿ. ಕಳ್ಳ ಬಂದ್ರೆ ಸೊಂಟ ಮುರಿದು ಹಾಕೇನು!" ಎಂದು ಸುಬ್ಬಣ್ಣ ಎಂಜಲು ನುಂಗುತ್ತಾ ಹೇಳಿದ. ರಾತ್ರಿಯಲ್ಲಿ ಹೊರಗೆ ಮಲಗುವುದೆಂಬ ಊಹೆ ಬಂದಕೂಡಲೇ ಅವನ ಕಾಲುಗಳು ನಡುಗಿದುವು.

ಲಕ್ಷ್ಮಿ ಎಂಜಲು ತಟ್ಟೆಗಳನ್ನು ತಾನೇ ಹೊರಗೆ ಒಯ್ದು ಗೋಡೆಯ ಬದಿಯಲ್ಲಿಟ್ಟು, "ಏನೂ ಭಯವಿಲ್ಲ ಅಕ್ಕಾ. ಬಾವ ಅಲ್ಲಿ ಮಲಗ್ತೇನೇ ಅಂದ್ರುಲ್ಲಾ?" ಎಂದಳು.



ಪಾರ್ವತಿಗೆ ಗಂಡನ ಪುಕ್ಕಲುತನವು ಚೆನ್ನಾಗಿ ಗೊತ್ತಿತ್ತು. "ಅವರು ಹೇಗೆ ಮಲಗುವರೇ? ಅವರಿಗೆ ಸರಿಯಾಗಿ ನಿದ್ದೆ..." ಎಂದೇನೋ ಹೇಳಲಿದ್ದಳು.

ಅಷ್ಟರಲ್ಲಿ ಸುಬ್ಬಣ್ಣ "ಎಲ್ಲಾ ಬರುತ್ತೆ. ನನಗೆ ನಿಮ್ಮಂಥ ಹೆಂಗುಸರಹಾಗೆ ಭಯಾ ಅಂದುಕೊಂಡ್ರಾ! ನನ್ನ ಗುಂಡು ದೊಣ್ಣೆ ಮಂಚದಲ್ಲಿಟ್ಟುಕೊಂಡು ಮಲಗಿಬಿಟ್ಟರೆ ಕಳ್ಳ ಆಯುಸ್ಸು ಮುಗಿದು ಸಾಯ ಬೇಕಾದರೆ ಬರಲಿ, ಅವನ ತಲೆ ಒಡೆದೇ ಹಾಕ್ತೇನೆ!" ಎಂದನು ಜಂಬದಿಂದ.

ಪಾರ್ವತಿ ಗಂಡನಿಗೆ ಹೊರಗೆ ಮಂಚ ಹಾಕಿದಳು. ಸುಬ್ಬಣ್ಣ ಮಂಚದಲ್ಲಿ ಒಂದು ದಪ್ಪದ ದೊಣ್ಣೆ ಯನ್ನು ಇಟ್ಟುಕೊಂಡನು. ಅಕ್ಕತಂಗಿಯರು ಬಾಗಿಲು ಹಾಕಿಕೊಂಡು ಒಳಗೆ ಮಲಗಿಕೊಂಡರು.

ಸುಬ್ಬಣ್ಣ ಮಂಚದಲ್ಲಿ ಮಲಗಿದ ಮೇಲೆ ಏನೇನೋ, ಎಲ್ಲೆಲ್ಲಿಯದೋ ಕಳ್ಳರ ಕೊಲೆಗಾರರ ಆಲೋಚನೆ ಬರತೊಡಗಿ ಗುಂಡಿಗೆ ನಡುಗುತ್ತಿರಲು,



ಅರ್ಧರಾತ್ರಿಯವರೆಗೂ ನಿದ್ದೆಬಾರದೆ ಅರ್ಧಾವಸ್ಥೆಯಲ್ಲಿಯೇ ಇದ್ದನು. ಆಮೇಲೆ ತನ್ನಂತೆ ಕಣ್ಣುಗಳಲ್ಲಿ ನಿದ್ರೆ ಕವಿಯಿತು. ಮತ್ತೆ ಸ್ವಲ್ಪ ಹೊತ್ತಿಗೆ ಯಾರೋ ಹೆಗಲಿನ ಹತ್ತಿರ ತಟ್ಟಿದಂತಾಗಿ ಥಕ್ಕನೆ ಕಣ್ಣು ತೆರೆದು ನೋಡಿ "ಆ" ಎಂದನು.

ಎದುರಿನಲ್ಲಿ ಒಬ್ಬ ಮುಸುಗಿನ ಕಳ್ಳ, ಅವನ ಕೈಯಲ್ಲಿ ಹೊಳೆಯುವ ಕತ್ತಿ. ಸುಬ್ಬಣ್ಣ ಕಣ್ಣುಗಳನ್ನು ತೇಲಿಸಿಕೊಂಡು, ನಾಲಗೆ ಅಂಟಿ ಹೋದವನಾಗಿ, ನಡುಗುವ ಕೈಯಿಂದ ದೊಣ್ಣೆಯನ್ನು ತಡವುತ್ತಾ ಎತ್ತಿದನು. ಅದು ಜಾರಿಬಿತ್ತು!

ಕಳ್ಳನು ಸಣ್ಣಗಿನ ಗೊಗ್ಗರದನಿಯಿಂದ, "ನನ್ನನ್ನು ಹೊಡೆಯಲಿಕ್ಕೆ ನೋಡುವಿಯಾ?" ಎಂದು ಕತ್ತಿಯನ್ನು ಎತ್ತಿದನು.

ಸುಬ್ಬಣ್ಣ ತಡವರಿಕೆಯ ದನಿಯಿಂದ, "ಬೇಡ ಬೇಡ! ಕತ್ತಿ ಬಿಟ್ಟು ಈ ದೊಣ್ಣೇನ ನೀನೇ ತಕ್ಕೋ. ಕತ್ತಿ ಅಂದರೆ ನನಗೆ ಮಾತೇ ಬಾರದು" ಎಂದನು.

"ಮೊದಲು ಬಾಗಿಲು ತೆರೆಯಿಸು. ನನಗೆ ಹಣ ಬೇಕು. ಬೇಗ!" ಎಂದು ಕಳ್ಳನು ಕತ್ತಿಯನ್ನು ಝಳಪಿಸಿದನು.

"ನಿನ್ನಪ್ಪಣ್ಯಪ್ಪಾ. ಒಳಗೆ ಹೆಂಗುಸರಿದ್ದಾರೆ. ನನ್ನ ಮರ್ಯಾದೆ ಹೋಗುತ್ತೆ. ಅಲ್ಲಿ ಬೆಳ್ಳಿ ತಟ್ಟೆಗಳಿವೆ. ಅವನ್ನು ತೆಕ್ಕೊಂಡು ಹೋಗಪ್ಪಾ, ನನ್ನ ಬಿಡೋ!" ಎಂದ ಸುಬ್ಬಣ್ಣ.

ಕಳ್ಳ ಹಲ್ಲು ಕಡಿದು, "ಈ ಎಂಜಲು ತಟ್ಟೆಗಳನ್ನು ಹೊತ್ತುಕೊಂಡು ಹೋಗಬೇಕೇ? ಬೇಗ ನಾನು ಹೇಳಿದ ಹಾಗೆ ಮಾಡು! ಹಣ, ಹಣ!" ಎಂದನು.

"ಮೆಲ್ಲಗೆ ಹೇಳಯ್ಯಾ. ಒಳಗೆ ನನ್ನ ಹೆಂಡ್ತೀ ಮಾತ್ರ ಅಲ್ಲ. ಎದೆ ನೋವಿನ ಹುಡುಗಿಯೂ ಇದ್ದಾಳೆ. ನಿನ್ನ ನೋಡಿದರೆ ಪ್ರಾಣ ಬಿಟ್ಟಾಳು" ಎಂದು ಸುಬ್ಬಣ್ಣ ಕಿಟಕೀ ಹತ್ತಿರ ಹೋಗಿ, "ಪಾರೂ, ಪಾರೂ" ಎಂದು ಮೆಲ್ಲನೆ ಕರೆದನು.

ಪಾರ್ವತಿ ಕಣ್ಣು ತಿಕ್ಕಿಕೊಳ್ಳುತ್ತಾ ಬಂದು, "ಹೆದರಿಕೆ ಆಗುತ್ತೆಯೇ? ಒಳಗೆ ಬರ್ತೀರಾ?" ಎಂದು ಕೇಳಿದಳು.

"ನಿನ್ನ ತಲೆ! ಇಲ್ಲಿ ದೊಡ್ಡವರೊಬ್ಬರು ನಿಂತಿದ್ದಾರೆ. ಅವರಿಗೆ ಅವಸರವಾಗಿ ಹಣ ಬೇಕಂತೆ. ಸಾಯಂಕಾಲ ರಂಗಣ್ಣ ತಂದುಕೊಟ್ಟ ಹಣದ ಚೀಲ ಇದೆಯಷ್ಟೆ? ಅದರ ಹೊರತು ಇನ್ನೇನೂ ಇಲ್ಲ. ಬೇಗ ಅದನ್ನು ಹೀಗೆ ಕೊಡು" ಎಂದನು ಸುಬ್ಬಣ್ಣ.

ಪಾರ್ವತಿ ಆಶ್ಚರ್ಯದಿಂದ ಗಂಡನನ್ನು ನೋಡಿ ಹಣದ ಚೀಲವನ್ನು ತಂದುಕೊಟ್ಟಳು, ಸುಬ್ಬಣ್ಣ ಅದನ್ನು ಕಳ್ಳನಿಗೆ ಕೊಟ್ಟ. ಮತ್ತೇನೂ ಹೇಳದೆ ಕಳ್ಳ ಕತ್ತಲೆಯಲ್ಲಿ ಎತ್ತಲೋ ಓಡಿಹೋದ. ಸುಬ್ಬಣ್ಣ ಹಣ ಹೋದುದನ್ನು ನೆನೆದು ದುಃಖಿಸುತ್ತಾ ಬೆಳತನಕ ಜಾಗರಣೆ ಮಾಡಿದ.

ಮರುದಿನ ಯಾರು ಆ ದೊಡ್ಡ ಮನುಷ್ಯನೆಂದು ತಿಳಿಯಲು ಪಾರ್ವತಿ ಪ್ರಯತ್ನಿಸಿದಾಗ, ಸುಬ್ಬಣ್ಣ

"ನಿನಗ್ಯಾಕೆ ಅದೆಲ್ಲಾ?" ಎಂದು ಗದರಿಸಿ ಅವಳ ಬಾಯಿ ಮುಚ್ಚಿಸಿಬಿಟ್ಟ. ಬೆಳಗಾಗಿ ಸ್ವಲ್ಪ ಹೊತ್ತಾದ ಮೇಲೆ ಲಕ್ಷ್ಮಿ ಸುಬ್ಬಣ್ಣನ ಬಳಿಗೆ ಬಂದು, "ಬಾವಾ, ಸಾಯಂಕಾಲ ನಾನು ಹೊರಟು ಹೋಗುತ್ತೇನೆ. ಬರುವಾಗ ಅಕ್ಕನಿಗೊಂದು ಸೀರೆ ತೆಗೆದುಕೊಳ್ಳುವಾ ಅಂತ ಮಾಡಿದೆ. ಆಗಲಿಲ್ಲ. ಹಣ ಕೊಡುತ್ತೇನೆ. ಒಂದು ಸೀರೆ ಕೊಂಡು ಕೊಂಡು ತನ್ನಿ" ಎಂದು ಹಣದ ಒಂದು ಚೀಲವನ್ನು ಕೊಟ್ಟಳು.

ಆ ಚೀಲವನ್ನು ನೋಡಿ ಸುಬ್ಬಣ್ಣ ಬೆಚ್ಚಿಬಿದ್ದನು. ರಾತ್ರಿಯಲ್ಲಿ ಅವನು ಕೈಯಾರೆ ಕಳ್ಳನಿಗೆ ಕೊಟ್ಟ ಚೀಲವೇ ಅದು!

ಲಕ್ಷ್ಮಿ ಮುಗುಳುನಗೆ ನಗುತ್ತ "ಹಾಗೆ ನೋಡುವಿರೇನು ಬಾವಾ? ಕಳ್ಳನಿಗೆ ಕೊಟ್ಟ ಹಣದ ಚೀಲ ನನ್ನ ಕೈಗೆ ಹೇಗೆ ಬಂತೂ ಅಂತಲಾ? ಆ ಕಳ್ಳ ನಾನೇ ಅಲ್ಲವೆ? ದುಪ್ಪಟಿ ಮುಸುಕು ಹಾಕಿಕೊಂಡು, ತರಕಾರಿ ಹಚ್ಚುವ ಕತ್ತಿ ಹಿಡಿದುಕೊಂಡಿದ್ದೆ. ಸ್ವರವನ್ನೂ ಬದಲಾಯಿಸಿಕೊಂಡೆ. ನೀವು ಅಂಜಿಕೆಯವರು ಅಂತ ಖಂಡಿತ ಆಯ್ತು. ತುಂಬಾ ಜಿಪುಣರು ಅಂತ ಮೊದಲೇ ನಾನು ಇಲ್ಲಿಗೆ ಬಂದ ಕೂಡಲೇ ಗೊತ್ತಾಗಿತ್ತು. ಸ್ನಾನಮಾಡಿ ಬಂದು ಪಕ್ಕದ ಕೋಣೆಯಲ್ಲಿದ್ದು ನೀವು ಅಕ್ಕನ ಹತ್ತಿರ ಮಾತಾಡಿದ್ದೆಲ್ಲಾ ಕೇಳಿದೆ. ಅಕ್ಕ ಕುರೂಪಿ ಅಂತ ನೀವು ಹೇಳಿ ತಿಳೀಬೇಕೆ? ಎಲ್ಲರಿಗೂ ಗೊತ್ತಿದೆ. ಅದು ಅಕ್ಕನ ತಪ್ಪೂ ಅಲ್ಲ. ಅದನ್ನು ಬದಲಾಯಿಸಿಕೊಳ್ಳಲಿಕ್ಕೆ ಆಗುತ್ತೇನು? ಮನಸ್ಸು ತಿಳೀ ಇರಬೇಕು. ಮನಸ್ಸನ್ನು ಒಳ್ಳೆಯದಾಗಿ ಇಟ್ಟುಕೊಳ್ಳಲು ಯಾರಿಗೂ ಸಾಧ್ಯವಾಗುವಂಥಾದ್ದು. ಈಗಾದರೂ ನಿಮಗೆ ಗೊತ್ತಾಗಿದ್ದೀತು. ಮಾತು ಮಾತಿಗೆ ಅಕ್ಕನ ಮನಸ್ಸನ್ನು ನೋಯಿಸಬೇಡಿ ಬಾವಾ! ನಾನು ಇಲ್ಲಿ ನಡೆದದ್ದು ಯಾರಿಗೂ ಹೇಳೋದಿಲ್ಲ. ನಂಬಿರಿ" ಎಂದಳು.

ಸುಬ್ಬಣ್ಣ ಬೆಪ್ಪು ಬಡೆದವನಾದನು. ಕಡೆಗೆ ಹಣದ ಚೀಲವನ್ನು ಲಕ್ಷ್ಮಿಯ ಮೇಲೆ ಬಿಸುಟು ಬೀದಿಗಿಳಿದು ಬಿರಬಿರನೆ ಹೊರಟುಹೋದನು.

"ನಿನ್ನ ಬಾವನಿಗೆ ಕೋಪ ಬಂತು ಕಣೇ. ಇಷ್ಟೆಲ್ಲಾ ರಂಪ ಏಕೆ ಮಾಡಿದಿ ಹೇಳು" ಎಂದು ಪಾರ್ವತಿ ಹೆದರಿದಳು.

ಆದರೆ ಸ್ವಲ್ಪ ಹೊತ್ತಿಗೆ ಸುಬ್ಬಣ್ಣ ಎರಡು ಬೆಲೆ ಬಾಳುವ ಸೀರೆಗಳನ್ನು ಹಿಡಿದುಕೊಂಡು ನಗುಮೊಗದಿಂದ ಮನೆಗೆ ಬಂದ. ಪಾರ್ವತಿ ಸಂತೋಷದಿಂದ ತಂಗಿಯ ತೋಳುಗಳನ್ನು ತಟ್ಟಿ, "ನಿನ್ನ ಬಾವಯ್ಯ, ಬದಲಾದ ಹಾಗಿದೆ. ನಾನು ಬಂದ ಮೇಲೆ ಇವರ ಮುಖದಲ್ಲಿ ಇಂಥಾ ನಗುವನ್ನು ನೋಡೇ ಇಲ್ಲ! ನೀನು ಬಹಳ ಗಟ್ಟಿಗಿತ್ತಿ!" ಎಂದಳು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

### ಗೆದ್ದ ಶೀರ್ಷಿಕೆಗಳು ೧೯೮೧ ಮೇ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



S. G. Seshagiri

★



K. Sitharam

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಮಾರ್ಚಿ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯ ಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು–೬೦೦೦೨೬

---

## ಜನವರಿ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ: ಗೆದ್ದೆವು ನಾವೇ ಅಹ್ಹಹ್ಹಾ!...

ಎರಡನೇ ಫೋಟೋ: ಇಬ್ಬರೂ ಸೇರಿ ತಾನೇ? ಇಸ್ಸಿಸ್ಸೀ!

ಕಳುಹಿಸಿದವರು: ಪಿ. ಎನ್. ಸಂಧ್ಯಾವಳಿ,

ಮದರಾಸು – ೨

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.

# WIN 777 fantastic prizes in the exciting

# Holiday Nepal



Just imagine the fun and adventure in Kathmandu...riding, boating, swimming, playing, sightseeing...every kind of excitement packed into every moment in the most glorious holiday of your life !

Look ! Kathmandu offers you all this !



* Wildlife...unbelievably thrilling !
* Mountain scenery-beautiful, breathtaking, out of this world !
* Children's films at the hotel
* Special children's libraries with comics, adventure stories,
* Video parlours throbbing with the exhileration of fast video games !
* Nurseries to take wonderful care of your little brother or sister,
* Other pastimes : refreshing swimming and boating in the hotels.
* Casino Nepal for your parents to enjoy evenings of thrills and excitement.





Enter the contest and win a super holiday to this exotic dreamland—Kathmandu !



## ★ Fabulous Bumper Prize with Special Rotating Trophy.

The lucky child who wins this magnificent trophy will be honoured at a special glittering function attended by several V.I.P's in New Delhi. The child will win the coveted title of STAR OF HOLIDAY NEPAL. Besides, there will be Free Air Fare for child and both parents, Ex-Delhi. Also, free Accomodation at the most luxurious Hotel Suite in Kathmandu for 4 days and 3 nights...with free meals, free transfers, free sightseeings And Rs. 300 worth Free Play Coupons Courtesy Casino Nepal for each parent







## 5 Grand First Prizes

Free Air Fare for the child ex-Delhi ex-Calcutta, ex-Patna. Free accomodati for the child and both parents for 4 days and 3 nights on the 5-star packa

## 5 Exciting Second Prizes

Free Air Fare for the child ex-Delhi, ex-Calcutta, ex-Patna. Free accomodati for the child and both parents on the 3-star package.

## 10 Third Prizes

Free Air Fare for the child ex-Delhi, ex-Calcutta, ex-Patna. Free Accomodation for child and both parent on the 2-star package.

## 251 Consolation Prizes

1 years' Free Subscription of Children's Magazine

## 505 Bonus Prizes

Attractive. colourful T-shirts.

**The Contest is so easy. And, Such fun too.**

All you have to do is paint a picture abou



CHANDAMAMA (Kannada) MARCH 1981 Regd. No. M. 5210

ಪಾರ್ಲೆ

# ನಿಮ್ಮ ನೆಚ್ಚಿನ ಬಿಸ್ಕಿಟ್‌ಗಳ ನಕಲು ಮಾಡುವವರನ್ನು ಹಿಡಿಯುವುದು ಒಂದು ಮಕ್ಕಳಾಟ

**ಅಕ್ಷರ ಸಂಯೋಜನೆ ಪರೀಕ್ಷಿಸಿರಿ P-A-R-L-E**
ನಮ್ಮನ್ನು ನಕಲು ಮಾಡುವವರು P-A-R-L-E ಶಬ್ದದ ಸಂಯೋಜನೆಯಲ್ಲೇ ಮೋಸಗೊಳಿಸುತ್ತಾರೆ. ಹೀಗೆ: P-E-R-L-E ಅಥವಾ P-E-A-R-L ಇದಲ್ಲದೆ G-L-U-C-O ಶಬ್ದವನ್ನು G-L-U-C-O-S-E ಎಂದು ಬರೆಯುತ್ತಾರೆ.

**ಯಾವಾಗಲೂ ನೆನಪಿನಲ್ಲಿಡಿರಿ**
ಪಾರ್ಲೆ ಮೊನೆಕೊ ಮತ್ತು ಕ್ರಾಕ್‌ಜಾಕ್ ಬಿಸ್ಕಿಟ್‌ಗಳು ಬಿಡಿಬಿಡಿಯಾಗಿ ಎಂದೂ ಮಾರಲ್ಪಡುವುದಿಲ್ಲ. ಫ್ಯಾಕ್ಟರಿಯಲ್ಲಿ ಸೀಲ್‌ಗೊಂಡ ವಾತಾನುರೋಧಿ ಪ್ಯಾಕ್‌ನಲ್ಲಿ ದೊರೆಯುತ್ತವೆ. ಇಂಥವು ವಿಶ್ವಾಸಾರ್ಹವಾಗಿರುತ್ತವೆ.

ಪಾರ್ಲೆ ಗ್ಲುಕೋ ಬಿಸ್ಕಿಟ್‌ಗಳು ಮಾತ್ರ ಪ್ಯಾಕ್‌ನಲ್ಲಿಯೂ, ಬಿಡಿಬಿಡಿಯಾಗಿಯೂ ಮಾರಲ್ಪಡುತ್ತವೆ. ಇವನ್ನು ಬಿಡಿಯಾಗಿ ಕೊಳ್ಳುವಾಗ PARLE GLUCO ಬಿಸ್ಕಿಟ್ ಮೇಲಿದ್ದ ಅಕ್ಷರ ಸಂಯೋಜನೆಯನ್ನು ಪರೀಕ್ಷಿಸಿರಿ.

**ತಿಂದು ನೋಡಿರಿ**
ಕೊನೆಯದಾಗಿ ರುಚಿಯೇ ನಿಮಗೆ ಸತ್ಯ ಸಂಗತಿಯನ್ನು ಹೇಳುತ್ತದೆ. ನಮ್ಮನ್ನು ನಕಲು ಮಾಡುವವರು ಎಷ್ಟೇ ಪ್ರಯತ್ನಿಸಿ ನಮ್ಮ ಬಿಸ್ಕಿಟ್‌ನ ಹೊರ ಆಕಾರವನ್ನು ನಕಲು ಮಾಡಿದರೂ ಪಾರ್ಲೆಯ ರುಚಿ ಹಾಗೂ ಉತ್ತಮಿಕೆಯನ್ನು ಅವರು ನಕಲು ಮಾಡಲಾರರು.



ವರ್ಲ್ಡ್ ಸಿಲೆಕ್ಷನ್
ಅವಾರ್ಡ್‌ನ ವಿಜಯಿ




ತಮ್ಮ ತಮ್ಮ ಕ್ಷೇತ್ರಗಳಲ್ಲಿ, ಭಾರತದಲ್ಲೇ ಅತ್ಯಧಿಕ ಮಾರಾಟವಾಗುವ ಬಿಸ್ಕಿಟ್‌ಗಳು
ಮೈಸುಟ್ಟುಕೊಂಡರೆ ನರಿಯು ಹುಲಿಯಾದೀತೇ; ನಕಲು ಬಿಸ್ಕಿಟ್ ಪಾರ್ಲೆಯಾದೀತೇ!

ಪಾರ್ಲೆ ಗ್ಲುಕೋ ಪಾರ್ಲೆ ಮೊನೆಕೊ ಪಾರ್ಲೆ ಕ್ರಾಕ್‌ಜಾಕ್

everest/80/PP/342-kn